ಸಮಗ್ರ

ಶ್ರೀ ಭಗವದ್ಗೀತಾ ತಾತ್ಪರ್ಯಯುಕ್ತವಾದ

ಕನ್ನಡ

# ಶ್ರೀಕೃಷ್ಣ ಗೀತಾ.



—[ ಓಂ ತತ್‌ಸತ್ ]—

ಸಮಗ್ರ

....ಶ್ರೀ ಭಗದ್ಗೀತಾ ತಾತ್ಪರ್ಯಯುಕ್ತವಾದ....

ಕನ್ನಡ

# ಶ್ರೀಕೃಷ್ಣ ಗೀತಾ

—: ಕವಿ —

ಕುಲೇನಾಪಿಕವಿಜರ್ಾಮದಗ್ನ್ಯಃ ಶ್ರೀ

ವೆಂಕಟ್ರಮಣ ಶಾಸ್ತ್ರೀ.



ಕರ್ತರು ಮತ್ತು ಪ್ರಕಾಶಕರು:
**ಶ್ರೀವೆಂಕಟ್ರಮಣ ನರಸಿಂಹ ಶಾಸ್ತ್ರೀ**
ಗೋಕರ್ಣ.





ಪ್ರಥಮ ಮುದ್ರಣ ೧೯೫೬

**ಬೆಲೆ:— ಹನ್ನೆರಡು ಆಣೆ**



ಅಧಿಕೃತ ಮಾರಾಟಗಾರರು:
**ಸರಸ್ವತಿ ಪುಸ್ತಕ ಭಂಡಾರ,**
ಗೋಕರ್ಣ.

ಮುದ್ರಕರು:
ಶ್ರೀ ಆರ್. ಎಸ್. ಹಿರೇಗಂಗೆ,
ಶ್ರೀ ಆನಂದ ಮುದ್ರಣಾಲಯ,
ಗೋಕರ್ಣ.



ಕರ್ಣೇ ಕರ್ಣೇ ಜಗತ್ಯಾಮಟತಿಬಹುವಿಧೈಃ ಸಚ್ಚರಿತ್ರೈರತೋಽಯಂ ।
ದೇಶಃಕರ್ಣಾಟಕಾಖ್ಯಃಪ್ರಭವತಿನ:ಧುರಾಗೀಶ್ಚಕಾರ್ಣಾಟಕೀಮೋ॥
ಗೀತಂ<u>ಜ್ಞಾನಾಸಿ</u>ತುಲ್ಯೈರ್ಯುಧಿಮಧುರಿಪುಣಾ <u>ತತ್ಪರೈ</u>ರೇವಪದ್ಯೈಃ ।
ಕಾರ್ಣಾಟಕ್ಯೈವವಾಣ್ಯಾ ತದಕರವಮಹಂ ಗಾತುಮಸ್ಮ-
ಜ್ಜನಾನಾಂ ॥

---

ಅಕ್ಷರಸಂಖ್ಯಯಾ: (ಜ್ಞಾನಾಸಿ ೭೦೦) (ತತ್ಪರೈಃ ೨೧೬)

# ಅಧ್ಯಾಯಾನುಕ್ರಮಣಿಕೆ



# ಆರತಿಗೆ ಮೊದಲು ಅಕ್ಷತೆ.

ವೇದ ಶಾಸ್ತ್ರ ಸಂಪನ್ನ ಶ್ರೀಮಾನ್ ವೆಂಕಟ್ರಮಣ ಶಾಸ್ತ್ರಿಗಳು ಹೊಸ್ಮನೆ ಇವರು ತಮ್ಮ ಗೀತಾ ತತ್ವ ನಿರೂಪಣಾ ಕವನ ಕೃತಿಗೆ ನಾಲ್ಕು ಮಾತುಗಳನ್ನು ಪ್ರಾಸ್ತಾವಿಕವಾಗಿ ಬರೆಯಲು ಕೇಳಿಕೊಂಡಾಗ ಆ ಗೌರವವು ನನ್ನ ಪಾಲಿಗೆ ಬಂದುದು, ಪೂಜ್ಯ ಶಾಸ್ತ್ರಿಗಳ ಅದೊಂದು ಮಧುರ ಅನುಗ್ರಹವೆಂದೇ ಶಿರಸಾವಹಿಸಿ ನಾನು ಈ ಕೆಲಸವನ್ನು ಆನಂದದಿಂದ ಒಪ್ಪಿಕೊಂಡೆನು.

ಶ್ರೀ ವೆಂಕಟ್ರಮಣ ಶಾಸ್ತ್ರಿಗಳ ಅಧಿಕಾರ ಬಹು ಹಿರಿದು. ಅವರ ವಿದ್ವತ್ತೆ-ಗೀರ್ವಾಣ ಭಾಷಾ ಪ್ರಭುತ್ವ, ಗೀತಾರ್ಥ ವಿಮರ್ಶಾ ವಿಚಕ್ಷಣತೆ, ವೇದಾಂತ, ಜ್ಯೋತಿಷ, ಕಾವ್ಯ, ವ್ಯಾಕರಣ, ವೇದ ವಾಙ್ಮಯ, ಧರ್ಮಶಾಸ್ತ್ರ, ವ್ಯವಹಾರ, ನೀತಿ ಇವೆಲ್ಲ ಕ್ಷೇತ್ರಗಳಲ್ಲಿ ನಿರಂಕುಶವಾಗಿ ನಿರಾತಂಕವಾಗಿ ನಡೆಯುವ ಅವರ ಬಹುಶ್ರುತ ಬಹುಧಾನಕ ಪ್ರತಿಭೆಗೆ ಮೆರಗು ಕೊಡುವಂಥ, ಎಂಥ ಪಂಡಿತರನ್ನೂ ಅಪ್ರತಿಭೆಗೊಳಿಸುವ ಅವರ ವಾಕ್ಪಟುತ್ವ, ಇದನ್ನೆಲ್ಲಾ ಅರಗಿಸಿಕೊಂಡು ಏಕರಸವಾಗಿ ಎರಕ ಹಾಕಿದ ಅವರ ನಿರಾಡಂಬರವಾದ ವ್ಯಕ್ತಿತ್ವ, ಇದೊಂದು ಗೋಕರ್ಣದ ಪ್ರಾಜ್ಞ ಪ್ರಪಂಚದ "ಸುಕುಮಾರ ಪ್ರಹರಣ" ಜ್ಞಾನಗರ್ವಿತವಾದ ಪರಪ್ರಾಂತೀಯ ವಿದ್ಯೆಯ ಶ್ರೀಗೆ ಪ್ರತ್ಯಾದೇಶ. ಕೇವಲ "ಟಂಕಾರೋತ್ತರ ಪಾಠಿನಃ" ಆದ ನಮ್ಮ ಕರ್ನಾಟಕದ ಸಾಹಿತ್ಯ ಸ್ವರ್ಗದ ಅಲಂಕಾರ !

ಗೋಕರ್ಣವು ಪ್ರಾಚೀನದಿಂದಲೂ ವೇದವಿದ್ಯೆ, ಸಂಸ್ಕೃತ ಪಾಂಡಿತ್ಯ, ಧರ್ಮಶಾಸ್ತ್ರಪಾರಂಗತರಿಗೆ ಒಂದು ತವರು. ಆದ್ಯ ಶಂಕರಾಚಾರ್ಯರಿಗೆ ಹಸ್ತಾಮಲಕನಂಥ ಶಿಷ್ಯೋತ್ತಮನನ್ನು ಒದಗಿಸಿದ ಈ ಕ್ಷೇತ್ರವು ತನ್ನ ಈ ವ್ಯಾಸಂಗ ಪರಂಪರೆಯನ್ನು ವಿಚ್ಛಿತ್ತಿ ಇಲ್ಲದೇ ಕಾಪಾಡಿಕೊಂಡು ಬಂದಿತು. ಈ ಶತಮಾನದ ಪೂರ್ವಾರ್ಧದ ವರೆಗೆ ಆ ಪರಂಪರೆಯ ಅಕ್ಷಯವಟದ ಒಂದು ಶಾಖೆ ಶ್ರೀ ವೆಂಕಟ್ರಮಣ ಶಾಸ್ತ್ರಿಗಳು. ಇತ್ತೀಚೆಗೆ ವನಮಹೋತ್ಸವಗಳೇ ಹೆಚ್ಚಾಗಿ ಜ್ಞಾನ ವೃಕ್ಷಗಳ ಬೇರುಗಳು ತೇವಿಲ್ಲದೇ ತಂಪಿಲ್ಲದೆ ಒಣಗಿ ಸಾಯತೊಡಗಿದ ಈ ಕಾಲಮಾನದಲ್ಲಿ ನವನಾಗರಿಕತೆಯ ನೈಜ ಸಂಸ್ಕಾರವೇನೂ ಬರದೆ ಹೊರ ಆಧುನಿಕತೆಯ ಅಪಸ್ಮಾರವಷ್ಟೇ ಪೀಡಿಸಿದ ಈ ತಲೆಮಾರಿನಲ್ಲಿ ಸನಾತನ ಸಾಂಪ್ರದಾಯದ ತಿರಸ್ಕಾರದೊಂದಿಗೆ ಪುರಾತನ ಸಂಸ್ಕೃತಿಯ ಹಾಗೂ ಅದರ ವಾಹನವಾದ ಸಂಸ್ಕೃತ ಸಾಹಿತ್ಯದ ಘೋರ ಉಪೇಕ್ಷೆಯೂ ಹಬ್ಬಹತ್ತಿರುವಾಗ ವಿದ್ವಾನ್ ವೆಂಕಟ್ರಮಣ ಶಾಸ್ತ್ರಿಗಳಂಥ ಕೆಲವೇ ಸದ್ವಿದ್ಯಾ ಪಂಡಿತರಾದ ಸಂಸ್ಕೃತ ಪಂಡಿತರು ಇನ್ನೂ ಊರ್ಜಿತವಾಗಿ ಉಳಿದದ್ದು, ಸ್ಫೂರ್ತಿಯಿಂದ ಇಂಥ ಸಾಹಿತ್ಯ ನಿರ್ಮಿತಿಗೆ ಇಳಿದದ್ದು, ಕೌತುಕದಷ್ಟೇ ಅಭಿಮಾನಕ್ಕೂ ಆಸ್ಪದವಾದ ಸಂಗತಿಯೇ ಸರಿ.

ಗೀರ್ವಾಣ ಭಾಷೆಯಲ್ಲಿಯೇ ನಿರರ್ಗಳವಾಗಿ ತಮ್ಮ ವಾಗ್ವೈಖರಿಯನ್ನು ಹರಿಯಬಿಡುತ್ತಿದ್ದ ಅವರ ಕವನ ರಚನಾಶಕ್ತಿಯು

ಕನ್ನಡ ತಾಯ್ನಾಡಿನ ಕೈಂಕರ್ಯಕ್ಕು ಕಂಕಣ ಕಟ್ಟಿಕೊಂಡದ್ದು ಕನ್ನಡ ಜನಪದಕ್ಕೆ ಒಂದು ಉಪಕಾರವೇ ಎನ್ನಬೇಕು. ಅವರ ಅನೇಕ ಕನ್ನಡ ಪದ್ಯಗಳನ್ನು ಕೇಳಿ ಓದಿನೋಡಿದ ನನಗೆ ಅವರ ಪದಪವಣಿಕೆಯ ಹದಹವಣಗಳ ಹಸ್ತ ಸಿದ್ಧಿಯ ಮನವರಿಕೆ ಹಿಂದೆಯೇ ಆಗಿತ್ತು. ಇದೀಗ ಭಗವದ್ಗೀತೆಯ ಸಾರವನ್ನು ತಿಳಿಗನ್ನಡದಲ್ಲಿ ದೇಸೀಯ ಮಾತ್ರಾವೃತ್ತವನ್ನೊಳಗೊಂಡ ಆರತಿಯ ಛಂದಸ್ಸಿನ ಒಂದಂದದಿಂದ ಕವನಾಕೃತಿಯಾಗಿ ರೂಪಿಸಿದ ಅವರ ಆ ಶಕ್ತಿ ನನ್ನ ಮನವರಿಕೆಯನ್ನು ಮನವಾರೆ ಮೆಚ್ಚುಗೆಯಾಗಿ ಮಾರ್ಪಡಿಸಿದೆ.

ನಿಜವಾಗಿಯೂ ಗೀತೆಯಂಥ ಒಂದು ಪ್ರಸಿದ್ಧ ಸುಶ್ಲಿಷ್ಟ ಪ್ರಮಾಣಭೂತವಾದ ಗಹನ ತತ್ತ್ವಾರ್ಥ ಪ್ರತಿಪತ್ತಿಯ ಗ್ರಂಥವನ್ನು ಸಾರಭೂತವಾಗಿ ಕನ್ನಡದಲ್ಲಿ ಕವನಬದ್ಧವಾಗಿ ಮಾಡುವದು ಅತ್ಯಂತ ಕಷ್ಟಸಾಧ್ಯ–ಅಲ್ಲ–ಅಷ್ಟು ಕಷ್ಟಕ್ಕೂ ಸಾಧ್ಯವೇ ? ಅಥವಾ ಅತ್ಯಂತ ಕಷ್ಟವೇ ಸಾಧ್ಯ ಅನ್ನುವಂತಿದೆ. ಮೂಲದ ವಾಗರ್ಥ ಸಂಪೃಕ್ತಿಯ ಪ್ರೌಢಿಮೆ ಕುಂದಣದಲ್ಲಿ ಕೆತ್ತಿ ಕೂಡಿಸಿದ ರತ್ನಾವಳಿಗಳಂತಿದ್ದ ಆ ಶಬ್ದಸೌಷ್ಠವ, ಶೈಲಿಯ ಆ ಗೌರವ, ಗಾಂಭೀರ್ಯ, ಸಂಕ್ಷೇಪವಾಗಿ ಬರುವ ಕನ್ನಡ ಪದ್ಯಗಳಲ್ಲಿ ಯಾರು ತರಬಲ್ಲರು ? ಎಷ್ಟು ಬರಬಲ್ಲದು? ಎಂದುಕೊಳ್ಳುವವರಿಗೆ ಶ್ರೀ ಶಾಸ್ತ್ರಿಗಳು ಆರತಿ ಮಾಡಿ ತೋರಿಸಿದ್ದಾರೆ.

ಮೂಲದ ಹದಿನೆಂಟು [೧೮] ಅಧ್ಯಾಯಗಳನ್ನು ಮೂರು ಗುಂಪಾಗಿ ಮಾಡಿ, ಅವುಗಳ ಅರ್ಥದ ಮರ್ಮವನ್ನು ಮೂರು ನೀಳ್ಗ

ಸನಗಳಾಗಿ ಆರತಿಯೆತ್ತುವಾಗ ಹೆಂಗೊರಳು ಪರಾಗವಾಗಿ, ಸಲಿಸ ವಾಗಿ ನುಡಿಯಬಹುದಾದ ಹಾಡುಗಬ್ಬಗಳಲ್ಲಿ ಅವರು ಲಲಿತವಾದ ಕನ್ನಡದಲ್ಲಿ ಹೆಣೆದಿದ್ದಾರೆ. ಕವನ ಸೌಂದರ್ಯಕ್ಕಾಗಿ ಇಲ್ಲಿ ವಿಶೇಷ ವಾಗಿ ಅರ್ಜುನನ ಪ್ರಶ್ನೋಪಪ್ರಶ್ನೆಗಳನ್ನು ಆಯ್ದಿಲ್ಲ. ಕೇವಲ ಶ್ರೀ ಕೃಷ್ಣನ ಉಪದೇಶಗಳನ್ನಷ್ಟೇ ನೆಯ್ದುಕೊಳ್ಳಲಾಗಿದೆ. ಆದರೂ ಅರ್ಜುನ ವಿಷಾದಾದಿಯೋಗಗಳ ಹಾಗೂ ವಿಶ್ವರೂಪ ದರ್ಶನಾಂತರದ ಅವನ ವಿಸ್ಮಯೋದ್ಗಾರಗಳನ್ನು ಕವಿ ಇಲ್ಲಿ ರೂಪಿಸಿದ್ದಾರೆ.

ಸಮ ಸಂಸ್ಕೃತ ಪದಬಂಧ, ಭಾವನಿಬಿಡವಾದ ವಾಗ್ಧೋರಣೆ ಪ್ರಾಸದ ಪ್ರಾಸಾದ ಕಟ್ಟುವ ವ್ಯಾಮೋಹದಲ್ಲಿಯೂ ಪ್ರಸಾದ ಗುಣಕ್ಕೆ ಲೋಪ ಬರದಂತೆ ದಕ್ಷತೆಯನ್ನಿಟ್ಟುಕೊಂಡ ಅರ್ಥ ಬಂಧುರವಾದ ರಚನೆಯ ಹಿಡಿತ, ಸಂಕ್ಷೇಪದ ಅವಸರದಲ್ಲಿಯೂ ಮೂಲದ ಸಮ್ಯಕ್ ಜ್ಞಾನವನ್ನು ಮಾಡಿಕೊಡುವ ಅವಧಾನದ ಮಿಡಿತ, ಈ ಕವನದುದ್ದಕ್ಕೂ ನಮ್ಮ ಕುತೂಹಲವನ್ನು ಕೆರಳಿಸುತ್ತವೆ; ಮನೋಮುಕುಲವನ್ನು ಅರಳಿಸುತ್ತವೆ.

"ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ ತೇಪಿಯಾಂತಿ ಪರಾಂ ಗತಿಂ" ಎಂಬುದು ಗೀತಾಧ್ಯಾಯದ ಪ್ರತಿಜ್ಞೆ. ಈವರೆಗೆ ಗೀತೆಯು ಅನೇಕ ಭಾಷ್ಯಗಳಾದವು. ವಾರ್ತಿಕಗಳಾದವು. ಟೀಕೆಗಳಾದವು. ಅನೇಕಾನೇಕ ಅನುವಾದಗಳಾದವು. ಆದರೆ ಈ ಪ್ರತಿಜ್ಞಾ ದಿಶೆಯಲ್ಲಿ ಸಾಕಷ್ಟು ದಾರಿ ಸರಿದಿದ್ದಿಲ್ಲ. ನಮ್ಮ ವಿದ್ವಾನ್ ವೆಂಕಟ್ರಮಣ ಶಾಸ್ತ್ರಿ

ಗಳು ಈ ನಿಟ್ಟಿನಲ್ಲಿ ದಿಟ್ಟವಾದ ಹೆಜ್ಜೆ ಇಟ್ಟಿದ್ದಾರೆ. ಈ ಆರತಿಯ ಹಾಡುಗಳು ಮುಖ್ಯತಃ ಹೆಣ್ಣು ಮಕ್ಕಳಿಗಾಗಿಯೇ ಗ್ರಾಮಾಂತರಗಳ ಜನಪದವಧುಗಳ ಮುಗ್ಧ ಮುಖಗಳಲ್ಲಿಯೂ "ಮಹದ್ ಗೀತಾಮೃತ" ದ ದುಗ್ಧ ಬಿಂದುಗಳು ನಲಿಯುವಂತೆ ಮಾಡಿದ ಅವರ ಕವಿತ್ವಕ್ಕೆ ಕೃತಾರ್ಥತೆಯು ಕಟ್ಟಿಟ್ಟದ್ದೇ ಸರಿ.

ಉಭಯಭಾಷಾ ಪ್ರಭುತ್ವವುಳ್ಳ ಶಾಸ್ತ್ರಿಗಳ ಪ್ರತಿಭೆಯ ಖನಿಯಿಂದ ಇನ್ನೂ ಅನೇಕಾನೇಕ ಕೃತಿಗಳು ಹೊರಬೀಳಲಿ. ಅವುಗಳ ಕಲೆ, ಕಾಂತಿಗಳು, ಕನ್ನಡ ಸರಸ್ವತಿಯ ಕಂಠಾಭರಣವಾಗಿ ಕಂಗೊಳಿಸಲಿ, ಎಂದು ನಾನು ಹಾರ್ದಿಕವಾಗಿ ಹಾರೈಸುತ್ತೇನೆ.

ಗೋಕರ್ಣ.
೧೮ ಜುಲೈ ೧೯೫೬
ಆಷಾಢ ಶುಕ್ಲ ಏಕಾದಶಿ

—ಗೌರೀಶ ಕಾಯ್ಕಿಣಿ

# ಕವಿಯ ಉದ್ದೇಶ

ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದ ತತ್ವಗಳನ್ನು ತಿಳಿದು ಅದರಂತೆ ಆಚರಿಸಬೇಕೆನ್ನುವ ಭಗವದ್ಭಕ್ತರಿಗೆ ಇದು ಸುಲಭವಾದ ಸಮೀಪದ ಹೆದ್ದಾರಿಯಾಗಿದೆ. ಇದರ ಹೆಸರು "ಶ್ರೀ ಗೀತಾಕೃಷ್ಣನ ಆರತಿ ಪದ್ಯಗಳು" ಎಂಬುದರಿಂದ ಭಾರತಯುದ್ಧಕಾಲದಲ್ಲಿ ಶ್ರೀಕೃಷ್ಣಾರ್ಜುನರ ಕೂಡುವಿಕೆಯಿಂದ ಆರಂಭಿಸಿದ್ದು ಹಿಂದಿನ ಗೌಣವಿಷಯಗಳನ್ನು ಬಿಟ್ಟಿರುತ್ತದೆ. ಮತ್ತು ಶ್ರೀಕೃಷ್ಣನು ತಾನು ಹೇಳಿದ ತತ್ವವು ಅರ್ಜುನನ ಮನಸ್ಸಿನಲ್ಲಿ ಸ್ಥಿರವಾಗಲೆಂದು ಒಂದೇ ಅರ್ಥದಲ್ಲಿ ವಿಧವಿಧವಾಗಿ ಹೇಳಿರುವ ಪದ್ಯಗಳ ತತ್ವವನ್ನು ಸರಾಗವಾಗಿ ಹಾಡುವಂತೆಯೂ ಹಾಡಲರಿಯದವರು ವಾಕ್ಯರೂಪವಾಗಿ ಓದಿ ತಿಳಿಯುವಂತೆಯೂ ಸಂಗ್ರಹಿಸಿ ೭೦೦ ಸಂಸ್ಕೃತ ಪದ್ಯಗಳುಳ್ಳ ೧೮ ಅಧ್ಯಾಯಗಳ ಸಾರಾಂಶವನ್ನು ಪ್ರತ್ಯೇಕವಾಗಿ ತಿಳಿಯುವಂತೆ ಕೇವಲ ೨೧೬ ಕನ್ನಡ ಪದ್ಯಗಳಲ್ಲಿಯೇ ಹೆಣೆದಿರುತ್ತದೆ. ಈ ನನ್ನ ಕರ್ಣಾಟಕ ಮಾತೆಯ ಸೇವೆಯು ನನ್ನ ಬಂಧು ಭಗಿನಿಯರಿಗೆ ಹೆಚ್ಚು ಮೆಚ್ಚಾಗಿ ಪರಿಣಮಿಸಿ ಜನಾದರಕ್ಕೆ ಪಾತ್ರವಾಗಲೆಂದು ಶ್ರೀಹರಿಯನ್ನು ಪ್ರಾರ್ಥಿಸುತ್ತೇನೆ.

ಕವಿಃ —ವೆಂಕಟ್ರಮಣ ಶಾಸ್ತ್ರೀ.



ಪ್ರಪನ್ನ ಪಾರಿಜಾತಾಯ ತೋತ್ರವೇತ್ರೈಕಪಾಣಯೇ ।
ಜ್ಞಾನಮುದ್ರಾಯ ಕೃಷ್ಣಾಯ ಗೀತಾಮೃತದುಹೇನಮಃ ॥

# ಶ್ರೀ ಗೀತಾಕೃಷ್ಣನ

# ಆರತಿ ಪದ್ಯಗಳು

## ॥ ಅರ್ಜುನ ವಿಷಾದ ಯೋಗ ॥

## ( ಅಧ್ಯಾಯ ೧ )

ರಾಗ:- ಶ್ರೀಶಂಕರಾಭರಣ, ಅಷ್ಟತಾಳ.

ಎತ್ತುವೇ । ಮಂಗಲಾರತಿಯಾ ಹರಿ । ಗೆತ್ತುವೆ ॥ ಪ ॥

ಮುತ್ತಿನಾರತಿಯದುವರಗೆ । ಹೊನ್ನಿ ।
ನಾರತಿ ನಂದ ನಂದನಗೆ । ರನ್ನ ।
ದಾರತಿ ನರನಸಾರಥಿಗೆ । ಸುಮ ।
ದಾರತಿ ಸಿರಿಯರಸನಿಗೆ ॥
ಗೀತೆಯನೆವದಲಿ । ನೀತಿಯನರುಹಿದ ।
ನರಗೆ ಸಾರಥಿಯಾಗಿ । ರಥದಿ ಕುಳಿತ ಹರಿ ॥ ೧ ॥

ಊದಿಯೆ ಶಂಖವ ಭರದಿ । ತನ್ನ ।
ಮುಂದ್ಡಾಪ ಮುಖದಿಂದ ಮುದದಿ । ವೈರಿ ।
ಹೃದಯಗಳದರುವ ತೆರದಿ । ಘೋರ ।
ನಾದವ ಗೈಯ್ಯುತ್ತ ರಣದಿ ॥
ಮಂದಹಾಸವ ಬೀರಿ । ಮುಂದಾಗಿ ನರಸಿಗೆ ।
ಸ್ಯಂದನವೇರಿತಾ । ಕುಳಿತಿಹ ಕೃಷ್ಣನಿ ॥ ೨ ॥

ದ್ರುಪದ ಸುತನು ರಚಿಸಿರುವ । ನರ ।
ಕರಿ ರಥ ತುರಗಗಳಿರುವ । ಘೋರ ।
ಸಮರ ಮಧ್ಯದಿ ನಿಲಿಸೆನುವ । ವೀರ ।
ನರನ ನುಡಿಯ ಕೇಳಿ ರಥವ ॥
ನಿಲಿಸಿ ಕರವ ನೀಡಿ । ವೀರರ ತೋರುವ ।
ನಗುಮೊಗದಾ ಯದು । ವೀರಗೆ ನೀರಜದೆ? ॥ ೩ ॥

ಸ್ವಜನರೆಂಬುದ ನೋಡಿ ನಿಜವು । ಕೃಷ್ಣ ।
ಕದಡಹತ್ತಿದೆ ಹಾಳ್ಮನವು । ದೇವ ।
ನಡುಗಹತ್ತಿದೆ ಕೇಳ್ ತನುವು । ಯನ್ನ ।
ಕರವ ಬಿಡುತಲಿದೆ ಧನುವು ॥
ನಿಲಲಾರೆ ಕೊಲಲಾರೆ । ನೆನುತಲೆ ಕುಳಿತಿಹ ।
ಪಾರ್ಥನನೋಡುತ । ನಗುತಿಹ ನರಹರಿ ॥ ೪ ॥

ಅರಿಯದೆ ಪಾಪವನೆಂತು | ರಣ |
ಧರಣಿಯೊಳಗೆ ಬಂದುನಿಂತು | ಯಮ |
ಯಾತನೆಯನೆ ಮರೆತಿಂತು | ನಾ |
ಪಾಪವಗೈವುದಕಿಂತು ||
ಕಂತುಪಿತನೆ ಹಿಂ | ತಿರುಗುವದೋ ತೆಂದು |
ಪೇಳುವ ನರನ ಮಾ | ತಾಲಿಸುತಿಹ ಹರಿ || ೫ ||

ಯಾರಿಗಾಗಿಯೆ ನಮ್ಮ ಸೊತ್ತು | ಅವ |
ರೆಲ್ಲ ಬಂದಿಹರಿಲ್ಲಿ ಸುತ್ತು | ಕೊಂದು |
ನಾನಿವರೆಲ್ಲರ ನತ್ತು | ಮತ್ತು |
ಬಾಳುವವನು ಕಾಣೆನೆತ್ತು ||
ಮತ್ತುಮತ್ತೆನುತಿಹ | ಪಾರ್ಥನ ನೋಡುತ್ತ |
ಮನದಿ ವಿಚಾರವ | ಮಾಡುವ ಮುರಹರ || ೬ ||

ಘೋರ ಪಾಪವ ಗೈಯ್ಯುವುದಕೆ | ಮುಂ |
ದರಿಯದೆ ಬಂದೆನಾನಿದಕೆ | ಪರಿ |
ಹಾರವಿಲ್ಲದ ಪಾತಕಕೆ | ಪಾಪ |
ನರಕವೆಂದಿಗು ತಪ್ಪದಿದಕೆ ||
ನಿಟ್ಟುಸಿರನೆಬಿಟ್ಟು | ಕೆಟ್ಟೆನೆನುತ ಮಾನ |
ದಟ್ಟ ಮಾತಾಡುವ | ನರನ ನೋಡುವ ಹರಿ || ೭ ||

ತರುಣರಳಿದಮೇಲೆ ಕುಲವು | ಬಲು |
ನಾಶವಾಗುವದಿದು ನಿಜವು | ಕುಲ |
ತರುಣಿಯರೆಲ್ಲರ ಮಾನವು | ಕಾಲ |
ವಶದಿಂದ ಕಾಮುಕರೊಲುವು ||
ತಾನಾಗಿ ಕೆಡುವಾಗ | ದುರ್ಗತಿ ಪಿತೃಗಳಿ |
ಗಾವಗೆಲೆನ್ನುವ | ಮಾತಕೇಳುವ ಹರಿ || ೮ ||

ಕೊಂದರೆ ಕೊಲಲೆನ್ನನವರು | ನನ್ನ |
ಗುರುಹಿರಿಯರು ಬಾಂಧವರು | ಕುರು |
ಕುಲದೊಳು ಜನಿಸಿದ ಸುತರು | ಅವ |
ರೆಲ್ಲರ ಕೂಡಿ ಬಂದವರು ||
ಕಾದದೆ ನಿಂದಿರು | ವೆನ್ನನೆಂದಗುಹಿದ |
ವಿಜಯನ ಮುಖನೋಡಿ | ನಗುತಿಹನಗಧರ || ೯ ||

ಬಂಧು ಬಾಂಧವರೆನಗಿಂದು | ಬಂದು |
ಸಮರದಿ ಕಾದಲಿಕೆಂದು | ನಿಂದು |
ಮುಂದಾಗಿ ತೋರುವರಿಂದು | ನೊಂದು |
ಮನದಲಿ ಕೊಲಲಾರೆನೆಂದು ||
ನಂದ ನಂದನನಗಭಿ | ವಂದಿಸಿ ಧನುವತಾ |
ನೊಗೆದು ನಿಂದಿಹ ನರ | ನೀಕ್ಷಿಸಿ ನುಡಿವವ || ೧೦ ||

## ॥ ಸಾಂಖ್ಯಯೋಗ ॥

## ( ಅಧ್ಯಾಯ ೨ )

**ರಾಗ, ತಾಳ.- ಮೋಲಿಸಂತೆ.**

ಕಣ್ಣೀರ ಸುರಿಸುತ್ತ ನರನು । ದಯೆ ।
ಯಿಂದ ತಾನಳುಕುತ್ತಲವನು । ಬಹು ।
ದುಃಖಪಡುತ ತನ್ನವರನು । ಯುದ್ಧ ।
ಸಿದ್ಧರಾಗಿಹ ಜನಗಳನು ॥
ನೋಡಿ ಮಾತಾಡಲು । ಬಾರದೆ ನಡುಗುತ್ತ ।
ನಿಂತಿಹ ನರನ ಜೀ । ತರಿಸುವ ಮುರಹರ ॥ ೧ ॥

ಕಲ್ಮಷವೆಲ್ಲಿದು ನಿನಗೆ । ಯುದ್ಧ ।
ಕಾಗಿಯೆ ಬಂದಿರುವವನಗೆ । ಕುಂದ ।
ತರದಿರು ಬರಿದೆ ನೀನನಗೆ । ಪಾರ್ಥ ।
ನಿನಗಾಗಿ ಬಂದಿರುವವಗೆ ॥
ಕಾಡುಜನರ ನುಡಿ । ಯಾಡಿ ನೀ ಕೆಡಬೇಡ ।
ನೋಡು ನೀನಾರೆಂಬು । ದನು ತಿಳಿವೆನುವವ ॥ ೨ ॥

ರಣದಲಿ ಗುರುಹಿರಿಯರದ । ನಾ ।
ರಕ್ತವ ಸುರಿಸಿಯುವರದ । ಮೇಲೆ ।
ನೃಪನಾಗಿ ಧರಣಿಯಾಳುವುದ । ದೇವ ।
ಪಾತಕಿಯಾಗಿ ಬಾಳುವುದ ॥
ಒಲ್ಲೆನಾಭಿಕ್ಷೆಯ । ಬೇಡಿಯಾವರು ಜೀವಿ ।
ಸುವೆನೆಂಬ ಪಾರ್ಥನ । ನಗುತ ನೋಡುವ ಹರಿ ॥ ೩ ॥

ವಿಜಯನೆಂದಿದೆ ನಿನ್ನ ಖ್ಯಾತಿ । ಮೂ ।
ಜಗವೊಳು ಬೀರಿದೆ ಕೀರ್ತಿ । ನರ ।
ನೀನೆಂದು ಹೆಸರಾದ ಮೂರ್ತಿ । ಈ ।
ರೀತಿಯಾಗುವದಪಕೀರ್ತಿ ॥
ಹೇಡಿಜನರ ನಡೆ । ನುಡಿಯದೆ ಬಿಡುದುಡಿ ।
ಹೂಡು ಗಾಂಡೀವವ । ನೇಳೆಂಬ ಸಾರಥಿ ॥ ೪ ॥

ಏನಾದರೇನೆಂಬುದರಿಯೋ । ಮನ ।
ಸೋತೆ ವಿಚಾರದಿ ಹರಿಯೆ । ಜಯ ।
ವಾದರು ನನಗದು ಸರಿಯೆ । ಅಲ್ಲ ।
ದಪಜಯವಾದರು ಸರಿಯೇ ॥
ಶ್ರೇಯವಾವುದನವ । ನರುಹು ನೀ ಗುರುವೆಂದು ।
ಶರಣುಬಂದಿಹ ನರ । ನೆಬ್ಬಿಸುತಿಹ ಹರಿ ॥ ೫ ॥

ಅರಿಗಳಳಿದು ಬಂದ ಧರೆಯು | ಸುರ |
ಲೋಕದ ಬಹುಪಾದ ಸಿರಿಯು | ಅದ |
ರಿಂದಲಾದರು ದೇಹದುರಿಯು | ತಾ |
ನಳಿಯದು ಶೋಕದ ಪರಿಯು ||
ಪರಿಹಾರವಿದಕೆ ನಾ | ಕಾಣೆ ದಾರಿಯನೀ |
ನರುಹೆಂದು ಪೇಳುವ | ಪಾರ್ಥಗೊಲಿದ ಹರಿ || ೬ ||

ಶೋಕಕಯೋಗ್ಯರಾದಿವರ | ಕಂಡು |
ಶೋಕಿಸಲಣಿಯಾದೆ ನೃಪರ | ಮಾತ |
ನಾಡುವೆ ಬಲು ತಿಳಿದವರ | ಮೃತ್ಯು |
ಲೋಕದಿ ಜನಿಸಿದ ಜನರ ||
ಅಳಿದವರನು ಮೇ | ಣುಳಿದವರನು ನೋಡಿ |
ಶೋಕಿಸಲಾರರು | ತಿಳಿದವರೆನುವವ || ೭ ||

ಬಾಲ್ಯ ಕೌಮಾರ ಯೌವ್ವನವು | ಮುಪ್ಪು |
ಬರುವಂತೆ ದೇಹಾಂತರವು | ಬಿಡ |
ದದು ಜೀವಿಗಳಿಗನುದಿನವು | ದುಃಖ |
ಮಾಡುವದಿದಕನುಚಿತವು ||
ಮರೆಯುದಲರಿತಿದ | ಧೀರ ಶೋಕಿಸಲಾರ |
ನರಿಯುವದರುಹುವೆ | ನರಿಯೆಂಬವರ ಯೋಗಿ || ೮ ||

ಇಲ್ಲವೆಂಬುದು ಇಲ್ಲವಿಲ್ಲ । ಇದ ।
ಕಿರುವಿಕೆಯೆಂಬುವದಿಲ್ಲ । ಇದೆ ।
ಯೆಂಬುವದದಕೆ ಸಾವಿಲ್ಲ । ಇದ ।
ರಂತವ ತಿಳಿದವರಿಲ್ಲ ॥
ತತ್ವದರ್ಶಿಗಳಿದ । ರಂತವ ತಿಳಿದಿಹ ।
ರದತಿಳಿತಿಳಿದವ । ನಾಗು ನೀನೆನುವವ ॥ ೯ ॥

ನಾಶವಾಗುವದೆಲ್ಲ ದೇಹ । ದೇಹ ।
ತಾನೆಂದು ತಿಳಿದಿದ ಸ್ನೇಹ । ಸ್ನೇಹ ।
ಬಲವಾಗಿ ಬಂದಿಹ ಮೋಹ । ಮೋಹ ।
ವಳಿವುದೆಂಬುದರಿಂದ ದಾಹ ॥
ದೇಹವಳಿದರು ನಿ । ಜಾತ್ಮವದುಳಿವುದು ।
ನಾಶವಾಗದು ಯುದ್ಧ । ಮಾಡುಮಾಡೆಂದವ ॥ ೧೦ ॥

ನಾಶವಾಗದ ವಸ್ತುವೊಂದು । ಸ ।
ದಾತ್ಮವಾಗಿರುವದದಿಂದು । ತಾ ।
ನೆಲ್ಲರೊಳಡಗಿದೆ ನಿಂದು । ಎಲ್ಲ ।
ವಳಿದರು ಸಾಯದೆಂದೆಂದು ॥
ಕೊಲುವುದು ಕೊಲಿಸಿಕೊ । ಳ್ಳುವುದೆಂಬ ನುಡಿಸಲ್ಲ
ಅನುಭವದಿಂದದ । ತಿಳಿಯೆಂದ ಗೋವಳ ॥ ೧೧ ॥

ಹುಟ್ಟು ಸಾವುಗಳಿಲ್ಲವವಗೆ | ಅವ |
ನಾಗಿ ಆಗುವನಲ್ಲವವಗೆ | ದೇಹ |
ನಾಶವಾದರು ಸಾಯದವಗೆ | ನಿತ್ಯ |
ವಾಗಿಹ ವಸ್ತುವಾದವಗೆ ||
ಕಡಿಯಲು ಸುಡಲುಕೊ | ಳಿಸಲೊಣಗಿಸಲವ |
ಸಿಗನೆಲ್ಲದರಲಿದ್ದ | ಪರಮಾತ್ಮನೆಂದವ || ೧೨ ||

ಹುಟ್ಟಿದ ಮನುಜಗೆ ಮರಣ | ಮತ್ತು |
ಮತ್ತಾಗುತಿರುತಿದೆ ಜನನ | ಕಟ್ಟು |
ನಿಟ್ಟಾಗಿ ಬರುತಿದೆ ತರುಣ | ಮಾಡಿ |
ನೋಡು ನೀನವರಮ ಮನನ ||
ತಿಳಿಯದಲಳಿಯದು | ಶೋಕವು ತಿಳಿವುದ |
ತಿಳಿದ ಮೇಲಳಿವುದು | ಪೇಳುವೆನೆನುವವ || ೧೩ ||

ಮನಸಿನ ಕಾಮಗಳಳಿದು | ಸಂ |
ಕಲ್ಪ ವಿಕಲ್ಪವ ತೊರೆದು | ರಾಗ |
ವೈರಗಳನೆ ಕಿತ್ತೆಗೆದು | ಭೋಗ |
ಭಾಗ್ಯಗಳೆಲ್ಲವ ಮರೆದು ||
ವಿಷಯ ರಹಿತವಾದ | ಮನವನು ಹೃದಯದಿ |
ನಿಲಿಸಿ ನೋಡುವನಾತ | ಸ್ಥಿತಮತಿಯೆಂದವ || ೧೪ ||

ಕಾಣದಲಿರುವವು ಮೊದಲು | ಮಧ್ಯ |
ಕಾಲದಿ ಕಂಡು ಜೀವಿಗಳು | ಕಾಣ |
ಲಾಗದ ಸ್ಥಿತಿಯ ಹೊಂದುವವು | ಕಂಡು |
ಕಾಣದ ಗತಿಯನು ದಿನವು ||
ಹೀಗಾಗುತಿರುವಾಗ | ಶೋಕಿಸಿ ಫಲವೇನು |
ಫಲ್ಗುಣ ಯುದ್ಧಕೆ | ಸಿದ್ಧನಾಗೆಂದವ || ೧೫ ||

ಆಶ್ಚರಿಯಾಗಿ ನೋಡುವರು | ಆತ್ಮ |
ನಚ್ಚರಿಯಾಗಿ ಕೇಳುವರು | ಮ |
ತ್ತಚ್ಚರಿಯಾಗಿ ಪೇಳುವರು | ಹೇಳಿ |
ಕೇಳಿಯು ತಿಳಿಯರು ಜನರು ||
ತಿಳಿವವ ಸಕಲದೊ | ಳಡಗಿದ್ದು ಸಕಲವ |
ನವರಿಂದಲಾತನ | ತಿಳಿಯರೆಂದವಗೆ ನಾ || ೧೬ ||

ಧರ್ಮವು ನಿನಗಿದು ಪಾರ್ಥ | ನಿಜ |
ವಾಗಿ ಶೋಕಿಸುವದು ವ್ಯರ್ಥ | ಮಾಡ |
ಬೇಡ ನೀ ಶಾಸ್ತ್ರದಪಾರ್ಥ | ಕ್ಷತ್ರ |
ಕುಲಕಿದು ವರಪುರುಷಾರ್ಥ ||
ಯುದ್ಧವೆ ನೃಪರಿಗೆ | ಶ್ರೇಯವು ಸ್ವರ್ಗದ |
ಹಾದಿಯೆನುವ ಯದು | ವಂಶ ಲಲಾಮ ನೀ || ೧೭ ||

ಸತ್ತರೆ ಸಿಗುವದು ಸ್ವರ್ಗ ॥ ವೀರ ।
ನೃಪರಿಗುಚಿತವಾದ ಸರ್ಗ । ಸಂ ।
ಪಾದಿಸಬಹುದು ತ್ರಿವರ್ಗ । ಜ್ಞಾನ ।
ಯುಕ್ತನಾದವಗಪವರ್ಗ ॥
ಜಯಿಸಿದರಿಳೆಯು ಸಂ । ಪದವಾಳಿ ಬಾಳುವಿ ।
ಸುಖಿಯಾಗಿ ನೀನೆಂದ । ನೀರಜನಾಭನಿ ॥ ೧೮ ॥

ಹೇಡಿಯಾಗಿಯೆ ರಣದಲ್ಲಿ । ಪಾರ್ಥ ।
ನೆತ್ತಲಾರದೆ ಕೈಯ್ಯಲ್ಲಿ । ವರ ।
ಗಾಂಡೀವವನು ತಾ ಚೆಲ್ಲಿ । ಓಡಿ ।
ಜಾರಿದ ಮುಖ ತೋರದಿಲ್ಲಿ ॥
ಎಂಬರಿಗಳ ನುಡಿ । ಕೇಳಿ ಪಡುವ ತಾಪ ।
ಸಾವಿಗಧಿಕ ವೆಂ । ದೊತ್ತಿ ಹೇಳಿದ ಹರಿ ॥ ೧೯ ॥

ಬೋಧಿಸಿದೆನು ಸಾಂಖ್ಯ ಶಾಸ್ತ್ರ । ಕೇ ।
ಳೀಗ ಪೇಳುವೆ ಯೋಗ ಶಾಸ್ತ್ರ । ಪಾಪ ।
ಪುಣ್ಯಗಳಳಿವ ಮಹಾಸ್ತ್ರ । ಯೋಗಿ ।
ಗಳಿಗಿದು ಪರಮ ಪವಿತ್ರ ॥
ಕರ್ಮ ಬಂಧನ ಹರಿ । ಸಾತ್ಮ ತತ್ವವ ತಿಳಿ ।
ಶಿವ ನಿಃಶ್ರೇಯಸವ । ನೆನುವ ರಮಾಧವ ॥ ೨೦ ॥

ಆರಂಭವಾಗಿರುವದಕೆ | ನಿತ್ಯ |
ವಾಗಿಹೆ ಕರ್ಮವೆಂಬುವಕೆ | ನಾಶ |
ವಿಲ್ಲವು ಧರ್ಮವಾದುದಕೆ | ಮೂಢ |
ಜೀಡನೀ ಸಂಶಯುವಿವಕೆ ॥
ಸ್ವಲ್ಪವಾದರು ಮನ | ಮುಟ್ಟಿ ಮಾಡಿದ ಧರ್ಮ |
ರಕ್ಷಿಸುವದು ಭಯು | ದಿಂದಲೆನ್ನುವ ಹರಿ ॥ ೨೧ ॥

ವೇದವನೋದಿದ ಜನರು | ಅದ |
ರರ್ಥವ ಮಾಡುತ್ತಲವರು | ಕರ್ಮ |
ಬ್ರಹ್ಮವೆಂದರಿತು ಪೇಳುವರು | ನಿಜ |
ವರಿಯದೆ ಮೂಢರಾದವರು ॥
ಭೋಗ ಸಂಪದಗಳ | ನಿಚ್ಛಿಸಿ ಸ್ವರ್ಗವೆ |
ಬ್ರಹ್ಮವೆಂದರಿತು ಕ | ರ್ಮವ ಮಾಳ್ಪರೆಂದವ ॥ ೨೨ ॥

ಕರ್ಮದಲಧಿಕಾರ ನಿನದು | ಫಲ |
ಮಾತ್ರದಿ ಪರಮಾತ್ಮನದು | ಕರ್ಮ |
ಫಲಕೆ ನೀ ಹೇತುವಾಗದುದು | ಯೋಗ್ಯ |
ಕರ್ಮವ ಬಿಡದಲಿರುವುದು ॥
ಫಲವನಾಶಿಸದೆ ನೀ | ಕರ್ಮವ ಮಾಡುತ |
ಹೊಂದು ವಿಮುಕ್ತಿಯ | ನೆಂದ ಮುಕುಂದನಿ ॥ ೨೩ ॥

ಸುಖದುಃಖಲಾಭನಷ್ಟಗಳ | ಮತ್ತು |
ಪಾರ್ಥ ಜಯಾಪಜಯಗಳ | ಸಮ |
ವಾಗಿ ನೋಡುತ್ತಲಿವುಗಳ | ವೈರಿ |
ಗಳ ಕೂಡಿ ಮಾಡು ನೀ ಜಗಳ ||
ತಗಲಸೆಂದಿಗು ಪಾಪ | ನಿನಗದರಿಂದ ಕೇ |
ಳದನಳಿವುದೆ ಯೋಗ | ವೆಂಬ ಜನಾರ್ದನ || ೨೪ ||

ಯೋಗಿಯಲ್ಲದ ಮನುಜನಿಗೆ | ದೃಢ |
ಬುದ್ಧಿ ಭಾವನೆಯಿಲ್ಲದವಗೆ | ತಾ |
ನಾರೆಂಬದರಿಯದಲವಗೆ | ಚಿರ |
ಶಾಂತಿ ಸುಖವು ತೋರವವಗೆ ||
ಸ್ಥಿರವಾದ ಬುದ್ಧಿ ಭಾ | ವನೆಗಳನೊಡಗೂಡಿ |
ಭಾವಿಸು ಬ್ರಹ್ಮವ | ದಾಗುವಿಯೆಂದವ || ೨೫ ||

ಯೋಗಿಯಾಗಿಯೆ ಮಾಡು ಕರ್ಮ | ಫಲ |
ದಾಶೆಯ ಬಿಡುವುದೆ ಮರ್ಮ | ಕರ್ತ |
ನಲ್ಲೆಂಬುದರಿತು ನೀ ಕರ್ಮ | ಫಲ |
ಕಣಿಯಾಗಬೇಡಿವೆ ಧರ್ಮ ||
ಸಿಧ್ಯ ಸಿದ್ಧಿಗಳಲಿ |ಸಮಮತಿಯಾದವ |
ಪೂರ್ಣವಯೋಗಿಯೆಂ| ದೆನುವ ಯೋಗೇಶ್ವರ || ೨೬ ||

ಮೋಹ ದೂಷಿತವಾದ ಮನವ । ಮೀರಿ ।
ಬುದ್ಧಿಯ ಕೊನೆಯ ನೋಡುವವ । ಪರ ।
ಮಾತ್ಮ ಧಾಮದಿ ಬೆರೆಯುವವ । ಸುಖಿ ।
ಯಾಗಿ ಮಾನವನಲಿವನವ ॥
ಕೇಳಿದ ಕೇಳಲು । ಯೋಗ್ಯವಾಗಿಹ ಪರ ।
ಮಾತ್ಮನ ಹೊಂದುವ । ನೆಂದ ಯತೀಂದ್ರನಿ ॥ ೨೯ ॥

ಮತಿವಂತನಾದ ಮಾನವನು । ಪಾಪ ।
ಪುಣ್ಯಗಳಳಿದು ಬಾಳುವನು । ನಿಜ ।
ಕರ್ಮವ ಬಿಡದೆ ಮಾಡುವನು । ಜನ್ಮ ।
ಬಂಧನ ಹರಿದೊಗೆದವನು ॥
ತನ್ನತಾನಿತರದ । ನಿಜವನರಿತು ಪರ ।
ಮಾತ್ಮ ಧಾಮದಿ ಬೆರೆ । ತವ ಯೋಗಿಯೆಂದವ ॥ ೨೮ ॥

ಯೋಗಿಯೆಂದೆನಿಸುವಿಯಾಗ । ಯಾ ।
ವಾಗಲಾತ್ಮದಿ ಬುದ್ಧಿಯೋಗ । ಇಂ ।
ದ್ರಿಯಗಳ ಬಿಗಿಹಿಡಿದಾಗ । ಲೆಲ್ಲ ।
ವಿಷಯಗಳನು ತೊರೆದಾಗ ॥
ಯೋಗ ಸಮಾಧಿಯ । ನನುಭವಿಸಿದನು ನೀ ।
ನಾತ್ಮದೊಳಾನಂದ । ಹೊಂದುವಿಯೆಂದವ ॥ ೨೯ ॥

ದುಃಖಕೆ ತಾನಂಜದವನು | ಸುಖ |
ದಿಚ್ಛೆಯು ಬಿಟ್ಟ ಮಾನವನು | ರಾಗ |
ಭಯ ರೋಷಗಳನಳಿದವನು | ಶು |
ಭಾಶುಭಗಳ ಮರೆತವನು ||
ಎಲ್ಲ ವಸ್ತುಗಳಲ್ಲು | ಸ್ನೇಹ ವೈರವ ಬಿಟ್ಟು |
ಶಾಂತವಾಗಿರುವವ | ಸ್ಥಿತಮತಿಯೆಂದವ || ೩೦ ||

ವಿಷಯವ ಸ್ಮರಿಸುವ ನರಗೆ | ಸಂಗ |
ವಪ್ಪುದು ಮನಕದರೊಳಗೆ | ಅದ |
ನಿಚ್ಛಿಸಿ ಯತ್ನ ಮಾಳ್ಪವಗೆ | ಅದು |
ಸಿಗದಾಗ ಸಿಟ್ಟಿನ ಸೆಲೆಗೆ ||
ಸಿಲುಕಿ ಮೋಹಕೆ ಮತಿ | ಗೆಟ್ಟವ ಮರುಳಾಗಿ |
ಹೊಂದುವ ನಾಶವ | ಕೊನೆಗವನೆಂದವ || ೩೧ ||

ಚಲಿಸುವಿಂದ್ರಿಯಃಕೆಡೆಗೊಡದೆ | ಮನ |
ವದಕನುಗುಣವಾಗಿ ಬಿಡದೆ | ವಿಷ |
ಯಗಳಲಿ ಮೋಹವ ಪಡದೆ | ಯೋಗಿ |
ನಡೆಯುವ ಧರ್ಮವ ಬಿಡದೆ ||
ಬಿಟ್ಟರೆ ಮನವನಿಂ | ದ್ರಿಯಕನುಗುಣವಾಗಿ |
ಕೆಟ್ಟು ಹೋಗುವಿಯೆಂದ | ಬಾಲ ಮುಕುಂದನಿ || ೩೨ ||

ಆಶೆಯ ಪಡುವವ ಪಡೆಯ | ಶಾಂತಿ |
ಎಂಬುದೆಂದೆಂದಿಗು ಗೆಳೆಯ | ನೀ |
ರೆಲ್ಲ ಮಳೆಯ ಮೇಣಿಳೆಯ | ಸೇರಿ |
ಬೆರೆಯುವ ತೆರದಿ ಜಲಧಿಯ ||
ಆತ್ಮದೊಳಾಸೆಗ | ಳೆಲ್ಲವನಳಿದು ಸ |
ದ್ರೂಪನಾಗುವಿಯೆಂದ | ವಸುದೇವಕಂದ ನಿ || ೩೩ ||

ಯಾವುದಿರುಳೊ ಜೀವಿಗಳಿಗೆ | ಹಗ |
ಲಾಗುವುದದು ಸಂಯಮಿಗೆ | ಜೀವ |
ಕೋಟಿಗಳೆಚ್ಚರದೊಳಗೆ | ಯೋಗಿ |
ನಿದ್ದೆಮಾಡುವನದರೊಳಗೆ ||
ಹಗಲಿರುಳೆನ್ನದೆ | ಸಾಕ್ಷಿಸದಾತ್ಮ ತಾ |
ನೆಂಬುದ ಮರೆಯದೆ | ಯುದ್ಧಮಾಡೆಂದವ || ೩೪ ||

ಬ್ರಹ್ಮ ತಾನಲ್ಲದೆ ಹೊರತು | ಬುದ್ಧಿ |
ಮೊದಲಾದವಲ್ಲವೆಂದರಿತು | ಮನ |
ನವಮಾಡಿನೋಡು ನೀಕುಳಿತು | ಸ |
ಮಾಧಿಯಾಗುವದಾಗಲೆಳಿತು ||
ಮರಣಕಾಲಕು ನೀ | ನಾರೆಂಬುದರಿತು ಸ |
ದಾತ್ಮದಿ ಬೆರೆಯುವಿ | ಯೆಂದಸದಾತ್ಮನಿ || ೩೫ ||

## ॥ ಕರ್ಮಯೋಗ ॥

### ( ಅಧ್ಯಾಯ ೩ )

ರಾಗ, ತಾಳ:—ಮೇಲಿನಂತೆ

ಯೋಗ ಸಾಂಖ್ಯಗಳೆರಡರೊಳು। ಯೋಗ।
ಕಿಂತಲು ಸಾಂಖ್ಯವೆ ಮೊದಲು। ಮೇ।
ಲೆಂದೆ ನೀನಾವುದದರೊಳು । ನಾ ।
ಮಾಡುವದನು ಪೇಳೆನಲು ॥
ಯೋಗ ಸಾಂಖ್ಯಗಳೆರ। ಡೊಂದೆ ನೀ ಯೋಗವ ।
ಮಾಳ್ಪದುಚಿತವೆಂದು । ಪೇಳ್ದ ಪರಾತ್ಪರ ॥ ೧ ॥

ಕರಣಗಳಿಂದ ಮಾಡುವದೇ। ಕರ್ಮ ।
ವೆಂದು ತಿಳಿಯಬೇಡ ಬರಿದೇ। ಕ್ಷಣ ।
ವಾದರುಮಾನವ। ಬಿಡದೇ ಚಿತ್ತ ।
ಶಾಂತಿಗೂ ತಾನೆಡೆಗೊಡದೇ ॥
ಮನದಿಂದಲಾದರು। ಮಾಡುವ ಕರ್ಮವ।
ಮಾಡದಲಿರಲಾರ । ನರನೆಂಕೇಳೆಂದವನ ॥ ೨ ॥

ಸ್ಮರಣೆ ಮಾಡುತ ಮನದಟ್ಟು | ವಿಷ |
ಯಗಳನೆ ಕರ್ಮವನಷ್ಟು | ಮಾಡ |
ಬೇಕಾದುದನು ತಾ ಬಿಟ್ಟು | ಎಲ್ಲ |
ಬಿಟ್ಟಹೆನೆನುತಲೆ ಕೆಟ್ಟು ||
ಹೋಗುವನವ ಕರ್ಮ | ಬಂಧಕೆ ಸಿಲುಕಿ ತಾ |
ಮರ್ಮವನರಿಯದೆ | ಸಾವನೆಂದವಗೆ ನಾ || ೩ ||

ಕರ್ಮವ ಮಾಡದೆ ನರಗೆ | ದೇಹ |
ಯಾತ್ರೆಯು ಸಾಧಿಸದವಗೆ | ಮಾಡ |
ದಿರುವುದಕಿಂತಲು ಕೊನೆಗೆ | ಮಾಳ್ಪ |
ದುಚಿತವೆಂದೆನಿಸುವದೆನಗೆ ||
ಲೋಕ ಸಂಗ್ರಹಕಾಗಿ | ಜನಕಾದಿ ನೃಪರಿದ |
ನಾಚರಿಸುತ ಸಿದ್ಧಿ ಹೊಂದಿದರೆಂದವ || ೪ ||

ಕರ್ಮೋದ್ಭವವಾದ ಯಜ್ಞ | ಕರ್ಮ |
ಬ್ರಹ್ಮೋದ್ಭವವೆಂದು ಸುಜ್ಞ | ತಿಳಿ |
ದಾಚರಿಸುವನವ ಯಜ್ಞ | ಇದ |
ನರಿಯದೆ ಬಿಡುವವನಜ್ಞ ||
ಸರ್ವ ಸಾಧಕವೀಶ | ಕರುಣೆಗೆ ಕಾರಣ |
ವದ ಮಾಡದವ ಪಾಪಿ | ಯಾಗುವನೆನುವವ || ೫ ||

ಪ್ರಜೆಗಳ ಸಹಿತ ಯಜ್ಞವನು । ಬ್ರಹ್ಮ ।
ಸೃಜಿಸಿ ಪೇಳಿದ ಮನುಜರನು । ನೀ ।
ವಿದ ಮಾಡಿ ಸುರರಿಗನ್ನವನು । ಕೊಟ್ಟ ।
ರವರೀಯುವರು ಸಕಲವನು ॥
ನೀವವರಿಗೆ ಕೊಡ । ದುಂಡರನ್ನವ ಬಹು ।
ಪಾಪಿಯಾಗುವಿರೆಂದು । ಪೇಳಿದ ಗೋವಳ ॥ ೬ ॥

ಶ್ರೇಷ್ಠನಾದವ ಮಾಳ್ಪ ತೆರದಿ । ಲೋಕ ।
ಗೈವುದು ಸಂಶಯ ಪಡದೆ । ಮಾಡು ।
ಕರ್ಮವನವರಿಂದ ಬಿಡದೆ । ಫಲ ।
ದೊಳಗೆ ನೀನಾಶೆಯನಿಡದೆ ॥
ಕೂಡುವಿಯಾತ್ಮದಿ । ಕೆಡದಿದು ಲೋಕವು ।
ಮಾಡುವುದುಚಿತವು । ನೀನೆಂದ ಗೋವಿಂದ ॥ ೭ ॥

ಪ್ರಕೃತಿಯಲುಂಟಾದ ಜಗವು । ಜಗ ।
ದೊಳಗೆ ಕಾಣುವ ಮೂರು ಗುಣವು । ಗುಣ ।
ಕನುಗುಣವಾಗಿಹ ತನುವು । ತನು ।
ಗೈವುದು ಬಿಡದನುದಿನವು ॥
ಕರ್ಮವನದಕೆ ನೀ । ಕರ್ತನಲ್ಲೆಂಬುದ ।
ತಿಳಿದಾಗ ಹೊಂದುವಿ । ಮುಕ್ತಿಯನೆಂದವ ॥ ೮ ॥

ಚಿತ್ತವನಾತ್ಮದಿ ನಿಲಿಸಿ | ನನ್ನೊ |
ಳೆಲ್ಲ ಕರ್ಮಗಳ ನೀನಿರಿಸಿ | ಮನ |
ದಾಸೆಗಳೆಲ್ಲವ ಮರೆಸಿ | ನಿನ್ನ |
ದಲ್ಲವಿದೆಲ್ಲವೆಂಬೆಣಿಸಿ ||
ಪ್ರಕೃತಿಯ ಗುಣವಾದ | ರಾಗ ವೈರಗಳನು |
ತೊರೆದೆನ್ನ ಸ್ಮರಿಸುತ್ತ | ಕಾದು ಕಾದೆಂದವ ||೯||

ಗುಣಹೀನವೆಂದು ನೀ ಸ್ಮರಿಸಿ | ನಿಜ |
ಧರ್ಮವನವ ಬದಿಗಿರಿಸಿ | ಪರ |
ಧರ್ಮವು ಸುಗುಣವೆಂದೆಣಿಸಿ | ಕೆಡ |
ಬೇಡ ನೀನವನು ಆಚರಿಸಿ ||
ಪರಧರ್ಮದೊಳಗಿದ್ದು | ಬದುಕಿರುವದಕಿಂತ |
ನಿಜಧರ್ಮದಲಿ ಸಾವು | ವರವೆಂದ ಗೋಪಂದ ||೧೦||

ಕಾಮ ರೋಷಗಳೆ ವೈರಿಗಳು | ನಿ |
ನ್ನಿಂದ್ರಿಯ ಮನ ಮತಿಗಳೊಳು | ನೆಲೆ |
ಮಾಡಿ ನಿಂತಿರುವ ಗುಣಗಳು | ಸೇರ |
ಬೇಡವೆಂದೆಂದಿಗವರೊಳು ||
ಜ್ಞಾನ ವಿಜ್ಞಾನಗ | ಳಳಿವವುಗಳಗೆದ್ದು |
ಸುಖಿಯಾಗಿ ಬಾಳೆಂದು | ಪೇಳುವ ಗೋವಳ ||೧೧||

ಬುದ್ಧಿಗುಪರವದು ಬ್ರಹ್ಮ। ಗುಣ।
ರಹಿತವಾದುದಕೀ ಕರ್ಮ। ಅದ।
ಕೆಂದಿಗು ತಗಲದು ಸುಮ್ಮ। ನೆಲ್ಲ।
ವದರನು ನೋಡುವ ಧರ್ಮ ॥
ಇಂದ್ರಿಯಗಳ ಮೀರಿ। ಮನವು ಮನವಮೀರಿ।
ಮತಿಯು ಮತಿಯಮೀರಿ। ಪರಮಾತ್ಮನೆಂದವ ॥ ೧೨ ॥

॥ ಜ್ಞಾನ ಕರ್ಮ ಸನ್ಯಾಸಯೋಗ ॥

( ಅಧ್ಯಾಯ ೪ )

ರಾಗ. ತಾಳ:—ಮೇಲಿನಂತೆ.

ಪೇಳಿದೆ ಮೊದಲಿದ ರವಿಗೆ। ಯೋಗ।
ಶಾಸ್ತ್ರವ ರವಿಯು ಮನುವಿಗೆ। ಮನು।
ಹೇಳಿದ ತಾತನ್ನ ಸುತಗೆ। ಯೋಗಿ।
ಜನಗಳಿಂದಿಳಿದು ಬಂತಿಳೆಗೆ ॥
ಅಂತರಂಗದವರ। ವಾದಯೋಗವನದ।
ನರುಹಿದೆ ಸಖನೆಂದು। ನಿನಗೆ ನಾನೆಂದವ ॥ ೧ ॥

ಪ್ರಕೃತಿಯು ವಶವಹುದೆನಗೆ | ನಾ |
ನದರಿಂದಲೆತ್ತುವೆ ಧರೆಗೆ | ಸಾಧು |
ಜನರನುದ್ಧರಿಸುವ ಬಗೆಗೆ | ಅವ |
ತಾರವ ಬಹು ವಿಧದೊಳಗೆ ||
ಜನ್ಮನಾಶಗಳಿಲ್ಲ | ದವನಾದರೆತ್ತಿ ನಾ |
ಜನ್ಮವ ಧರ್ಮರ | ಕ್ಷಣೆ ಗೈವೆನೆಂದವ || ೨ ||

ಜನ್ಮ ಕರ್ಮಗಳನು ನನ್ನ | ಸ್ಮರಿ |
ಸುತ್ತ ನೀನಾರೆಂಬುದನ್ನ | ತತ್ವ |
ದಂತೆಯೆ ತಿಳಿದು ನೀ ಮುನ್ನ | ದೇಹ |
ವಳಿದರು ಸೇರುವಿ ನನ್ನ ||
ಭಯ ರಾಗ ರೋಷಗ | ಳಳಿದು ಕರ್ಮದ ಫಲ |
ದಾಸೆಯ ಮಾಡದೆ | ಬಿಡು ದುಡಿಯೆಂದವ || ೩ ||

ಯಾವ ರೂಪದಲೆನ್ನ ಜನರು | ಮನ |
ದೊಳಗೆ ಸಂಭಾವಿಸುತಿಹರು | ಅವ |
ರಾತೆರದೆನ್ನ ಕಾಣುವರು | ಕಂಡ |
ರೂಪವನವರು ಹೊಂದುವರು ||
ಭಾವಿಸಿ ನಿರ್ಗುಣ | ನಿರುಪಮನೆಂದೆನ್ನ |
ಜಾಣನಾಗುವಿ ಕೇ | ಳೆಂದ ಗೋವಳರಾಯ || ೪ ||

ಕರ್ತನಲ್ಲೆಂಬುದನರಿತು | ಮಾಡು |
ಕರ್ಮಗಳೆನ್ನನು ಕುರಿತು | ಕರ್ಮ |
ಮಾಡದೆ ಬರಿದೆ ನೀ ಕುಳಿತು | ನೀ |
ಮಾಡುವದೆಂಬುದದೊಳಿತು ||
ಮಾಡಿದೆ ಮಾಡಿಲ್ಲ | ತಾನೆಂಬುದನೆ ಬಿಟ್ಟು |
ಕರ್ಮವ ಮಾಳ್ಪವ | ಮತಿವಂತನೆಂದವ || ೫ ||

ಕರ್ಮಾಕರ್ಮ ವಿಕರ್ಮ | ಅದ |
ರದನರಿಯದೆ ಗುಣ ಧರ್ಮ | ಕವಿ |
ಮೋಹ ಹೊಂದುವನದೆ ಮರ್ಮ | ಮೇ |
ಲಿದರೊಳು ಪೇಳುವೆ ಕರ್ಮ ||
ತಿಳಿದು ನೀನಾವುದ | ಬಳಲದೆ ಸುಖಿಯಾಗಿ |
ಬಾಳುವಿ ಕೇಳೆಂದ | ಗೋವಳರಾಯಗೆ || ೬ ||

ಕಾಮ ಸಂಕಲ್ಪವ ಬಿಟ್ಟು | ಜ್ಞಾನ |
ವೆಂಬ ಬೆಂಕಿಯಲಿದ ಸುಟ್ಟು | ಕರ್ಮ |
ವೆಲ್ಲವ ತಾ ಮನದಟ್ಟು | ಕರ್ತ |
ನಲ್ಲವೆಂಬುದ ಲಕ್ಷ್ಯದಿಟ್ಟು ||
ಕರ್ಮ ಮಾಡಿದರವ | ಹೊಂದಲಾರನು ಭವ |
ಬಂಧವನೆಂದ ಗೋ | ವಿಂದಗಾನಂದದಿಂ || ೭ ||

ವಿಧವಿಧವಾಗಿದೆ ಯಜ್ಞ । ಫಲ ।
ಕೆಂದು ಮಾಡುವನವನಜ್ಞ । ಯೋಗಿ ।
ಮಾಡುವನವನಾತ್ಮ ಯಜ್ಞ । ಜ್ಞಾನ ।
ಯಜ್ಞವೆ ವರವೆಂದು ಸುಜ್ಞ ॥
ಜ್ಞಾನವೆಂಬಗ್ನಿಯು । ಕರ್ಮವ ಸುಟ್ಟು ಸ ।
ದಾತ್ಮದಿ ಮತಿಯ ನೀ । ಡುವದೆಂದ ಗೋವಿಂದ ॥ ೮ ॥

ಬ್ರಹ್ಮದಿ ಕರ್ಮ ಸಮಾಧಿ । ಜ್ಞಾನ ।
ಯಜ್ಞದ ಹಾದಿಯನಾದಿ । ಇದ ।
ತಿಳಿದವ ವೇದವನೋದಿ । ಯೋಗಿ ।
ಯಾಚರಿಸುವನೀ ಸಮಾಧಿ ॥
ಯಜ್ಞವು ಯಜ್ಞದ । ವಸ್ತುಗಳೆಲ್ಲವು ।
ಬ್ರಹ್ಮವೆಂದರಿತು ನೀ । ಬ್ರಹ್ಮನಾಗೆಂದವ ॥ ೯ ॥

ಕರ್ಮದಿ ಯೋಗಿಯೆಂದೆನಿಸಿ । ಅದ ।
ಬಿಡದಲೆ ಕರ್ಮವ ನಡೆಸಿ । ಪರ ।
ಮಾತ್ಮನೊಳ್ ಬುದ್ಧಿಯ ನಿಲಿಸಿ । ಫಲ ।
ದಾಸೆಯ ಮನದಿಂದಲಳಿಸಿ ॥
ಜ್ಞಾನ ಖಡ್ಗದಿ ನಿನ್ನ । ಮನದ ಅಜ್ಞಾನವ ।
ಕಡಿದು ನೀ ಯೋಗಿಯಾ । ಗೇಳೆಂಬವರಯೋಗಿ ॥ ೧೦ ॥

# ಕರ್ಮ ಸನ್ಯಾಸಯೋಗ

## ( ಅಧ್ಯಾಯ ೫ )

**ರಾಗ, ತಾಳ:—ಸೋಲಿಸಂತೆ**

ತ್ಯಾಗ ಯೋಗಗಳಲ್ಲಿ ವಾದ | ಬರಿ |
ದದರೊಳಗಿಲ್ಲವು ಭೇದ | ಕರ್ಮ |
ತ್ಯಾಗದಿಂದೊದಗುವದಾದ | ಫಲ |
ಯೋಗದಲಿದೆ ನಿರ್ವಿವಾದ ||
ತ್ಯಾಗಕಿಂತಲು ಯೋಗ | ವಾತ್ಮ ಸಾಧೆಕವಿದು |
ಸಾಧಿಸಲನುವಾದ | ಹಾದಿಯೆಂದವಗೆ ನಾ || ೧ ||

ಸಾಧಿಸಲಹುದು ಪ್ರಯಾಸ | ಯೋಗ |
ವರಿಯುದ ನರಗೆ ಸನ್ಯಾಸ | ಹೋಗ |
ಬೇಡ ನೀನವರೊಳು ವೋಸ | ಕರ್ಮ |
ಯೋಗಿ ನೀನಾಗು ನರೇಶ ||
ಕರ್ಮಯೋಗವ ಮಾಡಿ | ದವ ಬೇಗ ಹೊಂದುವ |
ಬ್ರಹ್ಮವನೆಂದು ಪೇ | ಳಿದ ಪುರುಷೋತ್ತಮ || ೨ ||

ಯೋಗಿ ಕರ್ಮವ ಮಾಡುವಾಗ । ಕರ್ತ ।
ನಲ್ಲೆಂದು ತಾ ತಿಳಿದಾಗ । ಫಲ ।
ಸಂಗವ ತೊರೆದಿರುವಾಗ । ಭವ ।
ಬಂಧವ ನೀಗುವ ಬೇಗ ॥
ಬಿಟ್ಟು ಸಂಗವ ಕರ್ಮ । ವೆಲ್ಲವ ಬ್ರಹ್ಮದ ।
ಲಿಟ್ಟವನಿಗೆ ಪಾಪ । ತಟ್ಟದೆಂದವಗೆ ನಾ ॥ ೩ ॥

ಪಾಪ ಪುಣ್ಯಗಳವಗಿಲ್ಲ । ಯಾವ ।
ಫಲಗಳಿಗವ ಪಾತ್ರನಲ್ಲ । ಕರ್ಮ ।
ಕರ್ತೃತ್ವಗಳ ಲೋಕಕೆಲ್ಲ । ಪ್ರಭು ।
ವಾತ್ಮ ತಾ ಸೃಜಿಸುವದಿಲ್ಲ ॥
ಯಾಗ ಯೋಗಗಳುಂಬ । ಲೋಕದೈವತವೆಂಬ ।
ನಾಚಿನ್ನನುಣ್ಣುವಿ । ಶಾಂತಿಯನೆಂದವ ॥ ೪ ॥

ವಿಷಯದಲುಂಟಾದ ಸುಖವು । ಸ್ಥಿರ ।
ವಲ್ಲದು ದುಃಖದಾಯಕವು । ಯೋಗ ।
ದಿಂದ ತನ್ನೊಳಗಾದ ಸುಖವು । ನಾಶ ।
ರಹಿತವಾನಂದದಾಯಕವು ॥
ಕಾಯವಳಿವ ಮೊದ । ಲಿದ ಸಾಧಿಸಿದ ಧೀರ ।
ಹುಟ್ಟು ಸಾವುಗಳನು । ಹೊಂದನೆಂದವಗೆ ನಾ ॥ ೫ ॥

## ॥ ಆತ್ಮ ಸಂಯಮಯೋಗ ॥

## ( ಅಧ್ಯಾಯ ೬ )

**ರಾಗ, ತಾಳ:—ಮೇಲಿನಂತೆ.**

ಯೋಗವ ಮಾಡುವ ನರಗೆ । ಕರ್ಮ ।
ಕಾರಣವಾಗುವದವಗೆ । ಯೋಗ ।
ಮಾರ್ಗದಿ ಸಿದ್ಧನಾದವಗೆ । ಶಾಂತಿ ।
ಕಾರಣವೆನಿಸುವದವಗೆ ॥
ವಿಷಯಗಳಲಿ ಕರ್ಮ । ಗಳಲಿ ಸಂಕಲ್ಪ ಗ ।
ಳಲ್ಲಿಯು ಸಕ್ತನಾ । ಗದೆ ದುಡಿಯೆಂದವ ॥ ೧ ॥

ಬಂಧುವು ನೀ ನಿನಗಿಂದು । ವೈರಿ ।
ಯದರಂತೆ ನೀ ನಿನಗೆಂದು । ತಿಳಿ ।
ದುದ್ಧರಿಸಿಕೊ ನಿನ್ನನಿಂದು । ಅನ್ಯ ।
ರುದ್ಧರಿಸರು ತನ್ನನೆಂದು ॥
ಸುಖ ದುಃಖ ಮಾನಾಪ । ಮಾನದಿ ಸಮನಿದ್ದು ।
ಹೊಂದುವಿಯಾತ್ಮದ । ಲಾನಂದವೆಂದವ ॥ ೨ ॥

ಆಹಾರ ವ್ಯವಹಾರಗಳಲಿ| ನಿದ್ದೆ|
ಜಾಗ್ರತಿ ನಡೆ ನುಡಿಗಳಲಿ| ಮಿತ|
ವಾಗಿ ತಾ ನಡೆಯುವದರಲಿ| ಸಿದ್ಧಿ|
ಮನುಜಗಾಗುವದು ಶೀಘ್ರದಲಿ ||
ಮೂಗಿನ ತುದಿಯೊಳ| ಗಿಟ್ಟು ದೃಷ್ಟಿಯನೆನ್ನ|
ಸ್ಮರಿಸುತ್ತ ನೋಳ್ಪವ| ಹೊಂದುವನೆಂದವ || ೩ ||

ನಿಲ್ಲಿಸಿ ಚಿತ್ತವನಲ್ಲಿ| ಎಲ್ಲ|
ಕಲ್ಪನೆಯಳಿವುದರಲ್ಲಿ| ಬುದ್ಧಿ|
ಯಾಚೆಗಿರುವ ಬ್ರಹ್ಮದಲ್ಲಿ| ನೀ|
ನೊಂದಾಗಿ ತೋರುವಿ ಎಲ್ಲಿ|
ಜಗವ ತುಂಬಿರುವ ಪ| ರಾತ್ಮದಿ ಬೆರೆದು ಸ|
ಮಾಧಿಯ ಹರುಷವ| ನನುಭವಿಸೆನುವವ || ೪ ||

ಕಾಮ ಸಂಕಲ್ಪಗಳಳಿದು| ಮನ|
ದಿಂದ್ರಿಯಗಳ ಬಿಗಿಹಿಡಿದು| ಮೆಲ್ಲ|
ಮೆಲ್ಲನೆ ಮತಿಯನೆ ಸೆಳೆದು| ನಿರ್ವಿ|
ಕಾರ ಚಿದಾತ್ಮನೊಳುಳಿದು ||
ವಿಷಯವಿಲ್ಲದ ಮನ| ಸಾಧಿಸಿ ಮತಿಯಿಂದ|
ಆತ್ಮ ಸಮಾಧಿಯ| ಸಾಧಿಸೆನುವ ಹರಿ || ೫ ||

ವಿಷಯದಲಲೆದಾಡುತಿರುವ | ಸ್ವ |
ಭಾವದ ಚಂಚಲ ಮನವ | ಬಿಗಿ |
ಹಿಡಿದಿಟ್ಟು ಚಲಿಸದೆ ತನುವ | ನೆಲ್ಲ |
ವಿಷಯಗಳಳಿದಿಹ ಮನವ ||
ಹೃದಯದಿ ನಿಲಿಸಿದ | ರಾಗ ಸಮಾಧಿಯ |
ಹರುಷವನಾತ್ಮದಿ | ಹೊಂದುವಿಯೆಂದವ || ೬ ||

ಸಕಲದೊಳೆನ್ನರಿತವನು | ಅವ |
ತನ್ನೊಳಗೆನ್ನ ಕಾಣುವನು | ಸರ್ವ |
ವಸ್ತುಗಳೆನ್ನೊಳೆಂದವನು | ನನ |
ಗವನೆಡಬಿಡದೆ ಕಾಣುವನು ||
ತಾನೆ ತಾನಾಗವ | ನಾತ್ಮರೂಪವ ಹೊಂದಿ |
ಭವಕೆಂದು ಬಾರನೆಂ | ದರುಹಿದ ಗೋವಿಂದ || ೭ ||

ಯೋಗವ ಮಾಡುತ ನರನು | ಮೃತ |
ನಾದರು ಶ್ರೀಮಂತಿ ತಾನವನು | ವರ |
ಕುಲದಲಿ ಹುಟ್ಟಿ ಯೋಗವನು | ಸಾ |
ಧಿಸಿ ಮುಕುತಿಯ ಪಡೆಯುವನು ||
ಪಡೆಯಲೆನ್ನನು ಯತ್ನ | ಮಾಳ್ಪರೊಳುತ್ತಮ |
ಭಕ್ತಿಯಿಂ ಭಜಿಸುವ | ಯೋಗಿಯೆಂದವಗೆ ನಾ || ೮ ||

## ॥ ಜ್ಞಾನ ವಿಜ್ಞಾನ ಯೋಗ ॥

## ( ಅಧ್ಯಾಯ ೭ )

**ರಾಗ: — ಕಲ್ಯಾಣಿ (ಅಷ್ಟತಾಳ)**

॥ ೧ ॥

ಆರತಿಯನಾನೆತ್ತಿ ಬೇಡುವೆನು । ಶ್ರೀ ಹರಿಯ ವರವನು ।
ನೀಡು ನೀನನಗಿಷ್ಟವಾದುದನು ॥
ಜ್ಞಾನ ವಿಜ್ಞಾನಗಳ ನರನಿಗೆ । ತಿಳಿವುದುಳಿಯದ ತೆರದಿ ಸಂಶಯ ।
ವಳಿದು ಪರಮಾತ್ಮನಲಿ ಬೆರೆಯುವ । ರೀತಿಯನು ತಾನೆಂದ ಗೋವಳ

॥ ೨ ॥

ಪ್ರಕೃತಿಗಳು ಕೇಳೆಂಟು ನನಗುಂಟು । ಒಂಭತ್ತನೆಯದದು ।
ಜಗವನಾಳುವ ಶಕ್ತಿ ಬೇರುಂಟು ॥
ಭೂಜಲಾಗ್ನಿ ಮರುದ್ಗಗನ ಮನ । ಮತ್ಯಹಂಕೃತಿಗಳಿಗಿವೆಂಟಕು ।
ಪ್ರಕೃತಿಯದು ಹೆಚ್ಚಿನದು ನನ್ನದು । ಜೀವಿಗಳಿಗದು ಜನನಿಯೊಂದವ

‖ ೩ ‖

ಹೇತುವಾಗಿದೆ ಹುಟ್ಟದೀ ಜಗಕೆ | ನಾನೊಡಯುನದಕೆ |
ಸೃಷ್ಟಿ ಲಯ ಕಾರಣನು ಎಲ್ಲದಕೆ ‖
ಹೊರತು ನನ್ನಿಂದಿಲ್ಲ ಸಕಲವು | ಸೂಲಿನಲಿ ಪೋಣಿಸಿದ ಮಣಿಗಳೆ |
ತೆರದಿ ಭೂತಗಳಲ್ಲಿ ನಾಗಂ | ಧಾದಿಗುಣನೆಂದಾ ಮುಕುಂದನಿ

‖ ೪ ‖

ಮೂರು ಗುಣವಿರುವದನು ಮೀರುವದು | ನರರಿಂದಲಾಗದು |
ನನ್ನ ಭಜಿಸುವ ಜನಕೆ ಸುಲಭವದು ‖
ವಾಸುದೇವನೆ ಸರ್ವವೆಂದರಿ | ತೆನ್ನ ಭಜಿಸುವ ಜಾಣ ಮೀರುವ |
ಮಾಯೆಯನು ಬಹುಜನ್ಮಗಳ ಕಳೆ | ದವನು ಹೊಂದುವನೆಂದ ಮಾಧವ

‖ ೫ ‖

ಸಕಲ ಭೂತಗಳಲ್ಲಿ ಜೀವನವು | ನಾನವಕೆ ಬೀಜವು |
ತಪನ ಮಾಳ್ಪವರಲ್ಲಿ ನಾ ತಪವು ‖
ಮತಿಯು ಮತಿವಂತರಲಿ ತೇಜೋ | ಯುಕ್ತರಾದವರಲ್ಲಿ ತೇಜವು |
ಬಲವು ಬಲವಂತರಲಿ ಧರ್ಮಾವಿ | ರೋಧವಲ್ಲದ ಕಾಮನೆಂದವ

‖ ೬ ‖

ಭೂತಗಳನಧಿಕರಿಸಿ ನಿರ್ಜರರ | ಅಧಿಕರಿಸಿ ಯಜ್ಞಗ |
ಳನ್ನು ನಾನಿಪೆನೆಂದು ತಿಳಿದವರ ‖
ಮರಣ ಕಾಲಕು ಬಂದು ದರ್ಶನ | ವಿತ್ತು ಸಲಹುವೆ ನೀವೆ ಮುಕ್ತಿಯ |
ತಿರುಗಿ ಬಾರರು ಭವಕೆ ಹೊಂದವ | ರೆನ್ನನೆಂದ ಮುನೀಂದ್ರವಂದಿತ

## ॥ ಅಕ್ಷರ ಪರಬ್ರಹ್ಮಯೋಗ ॥

## ( ಅಧ್ಯಾಯ ೮ )

**ರಾಗ, ತಾಳ:-ಮೇಲಿನಂತೆ.**

॥ ೧ ॥

ಭೂತ ದೈವಾಧ್ಯಾತ್ಮ ಯಜ್ಞಗಳ । ಅಧಿಕೂಡಿದವುಗಳ ।
ಆತ್ಮ ಕರ್ಮಗಳೆಂಬ ವಸ್ತುಗಳ ॥
ತತ್ವವನು ತಿಳಿದಾತ ಕಾಣುವ । ಮರಣ ಕಾಲಕು ತನ್ನೊಳಾತ್ಮವ ।
ಯಾವ ತೆರದಿಂದದನು ಪೇಳುವೆ । ಕೇಳು ನರನೆಂಬಾ ಮುಕುಂದನಿ

॥ ೨ ॥

ನಾಶಯುತವಧಿಭೂತ ಸಮುದಾಯ । ಅಧ್ಯಾತ್ಮವೇ ಸ್ವ ।
ಭಾವವಧಿದೈವತವು ಪುರುಷಮಯ ॥
ದೇಹದೊಳಗಧಿಯಜ್ಞ ನಾನೇ । ನಾಶರಹಿತ ಪರಾತ್ಮ ರೂಪನು ।
ಭೂತ ಸಮುದಾಯಗಳ ಸೃಷ್ಟಿಯು । ಕರ್ಮವೆನಿಸುವದೆಂದ ಯಾದವ

॥ ೩ ॥

ಯಾವ ಭಾವವ ಭಾವಿಸುತ ನರನು । ದೇಹವನು ಬಿಡುವನು ।
ರೂಪವದನವ ತಿರುಗಿ ಹೊಂದುವನು ॥
ಅಣುವಿಗಣುವಾಗಿದ್ದು ನೋಡುವ । ಜಗವನಾಳುವ ರವಿಯ ತೆರದಲಿ ।
ಬೆಳಗುವೆನ್ನನು ಭಾವಿಸುವನವ । ಮರಣ ಕಾಲಕು ಪಡೆವನೆಂದವ

॥ ೪ ॥

ಅಂತಕಾಲದಿ ಯೋಗ ಬಲದಿಂದ । ಸ್ಥಿರ ಚಿತ್ತದಿಂದ ।
ಹುಬ್ಬುಗಳ ಮಧ್ಯದಲಿ ಭರದಿಂದ ॥
ಪ್ರಾಣವನು ತಾನಿಟ್ಟು ಭಾವಿಸಿ । ಯೋಗಿಯರಿತಾವುದನು ಹೊಂದುವ ।
ನಕ್ಷರಾತ್ಮನ ತಿಳಿವ ರೀತಿಯ । ಕೇಳು ಪೇಳುವೆನೆಂದ ಗೋವಳ

॥ ೫ ॥

ಯುಗ ಸಹಸ್ರಗಳಿಂದ ಕೂಡಿದದು । ಬ್ರಹ್ಮನಿಗೆ ಹಗಲದ ।
ರಂತೆ ರಾತ್ರಿಯ ಕಾಲವಾಗುವದು ॥
ಕಾಣದಿರುವವನಿಂದ ಸಕಲವು । ಸೃಷ್ಟಿಯಾಗುವ ಕಾಲ ಹಗಲದು ।
ಸಕಲವವನೊಳು ಕಾಣದಾಗುವ । ಕಾಲ ರಾತ್ರಿಯದೆಂದು ಪೇಳ್ದವ

॥ ೬ ॥

ಇಂದ್ರಿಯ ದ್ವಾರಗಳ ಬಿಗಿಹಿಡಿದು । ಹೃದಯದಲಿ ಚಿತ್ತವ ।
ಚಲಿಸದಂತೆಯೆ ತಿರುಗಿ ತಾ ತಡೆದು ॥
ಓಂ ಇದನು ಭಾವಿಸುತ ಜಪಿಸುತ । ನೆತ್ತಿಯಲಿ ತಾನಿಟ್ಟು ಜೀವನ ।
ದೇಹವನು ಬಿಟ್ಟವನು ಸೇರುವ । ನೆನ್ನನೆಂದ ಮಹಾ ಯತೀಂದ್ರನಿ

॥ ೭ ॥

ದಾರಿಯೆರಡಿದೆ ಜೀವಗೀತೆರದ । ಉತ್ತರವು ದಕ್ಷಿಣ ।
ವದರಲುತ್ತರವುತ್ತಮವು ಸುಖದ ॥
ಬೆಳಕು ಬೆಂಕಿಯುದದಕೆ ಮಾಸಗ । ಳಾರು ಪಕ್ಷವು ಶುಕ್ಲ ಹಗಲುಗ ।
ಳಿಂದ ಕೂಡಿದ ಮಾರ್ಗದಲಿ ಜೀ । ವನಿಗೆ ಮೋಕ್ಷವಿದೆರದ ಮಾಧವ

|| ೮ ||

ಧೂಮ್ರ ವರ್ಣದನೇಕ ರಾತ್ರಿಗಳ | ಮತ್ತಾರು ತಿಂಗಳು |
ಗಳನು ಕೂಡಿದ ಕೃಷ್ಣಪಕ್ಷಗಳ ||
ದಾರಿಯದು ದಕ್ಷಿಣವು ಚಂದ್ರನ| ಬೆಳಕು ಹೊಂದಿದ ಮಾನವನುತಿರು|
ತಿರುಗಿ ಜನ್ಮಕೆ ಬಂದು ಬಳಲುತ | ಹೊಂದದೆನ್ನನು ಸಾವನೆಂದವ |

|| ೯ ||

ಭೂತಗಳ ಸಮುದಾಯವೀತೆರದಿ |ತಿರುತಿರುಗಿ ಭರದಿ |
ಹುಟ್ಟಿ ನಾಶವ ಪಡೆವುದೀ ಕ್ರಮದಿ ||
ಹಗಲು ರಾತ್ರಿಗಳಲ್ಲು ಮರೆಯದ |ಲೆನ್ನ ಭಜಿಸುವ ಭಕ್ತರಿಗೆ ನಾ |
ಸುಲಭವಾಗಿಹೆನೆಂದು ಹರುಷದ | ಲರುಹಿ ಸಂತೈಸಿದ ಸುರೋತ್ತಮ

|| ರಾಜವಿದ್ಯಾ ರಾಜಗುಹ್ಯಯೋಗ ||

## ( ಅಧ್ಯಾಯ ೯ )

**ರಾಗ, ತಾಳ:- ಮೇಲಿನಂತೆ.**

|| ೧ ||

ಸಾಧಿಸಲು ಬಹು ಸುಲಭವಾಗುವದು | ನಿಜ ಧರ್ಮವಾದುದು |
ರಾಜವಿದ್ಯಾ ರಾಜಗುಹ್ಯವಿದು ||
ಶ್ರದ್ಧೆಯನು ತಾನಿದರಲಿಡದವ| ಪಡೆಯದೆನ್ನನು ಘೋರ ಸಂಸಾ |
ರದಲಿ ಹೊಂದುವ ಜನ್ಮ ಮರಣವ ಮುಕ್ತನಾಗದೆ ಜೀವನೆಂದವ

॥ ೨ ॥

ಇದ್ದು ಕಾಣದ ನಾನು ಸಕಲವನು। ಸೃಜಿಸುವೆನು ಜಗವನು।
ಸುಜ್ಞರರಿತಿಹರಿದರ ತತ್ವವನು ॥
ಎಲ್ಲವಿವು ನನ್ನಲ್ಲಿ ನಾನಿ। ಲ್ಲಿವುಗಳಲಿ ನನ್ನಲ್ಲಿವಿಲ್ಲವು।
ನನ್ನ ಭಾವನೆಯಿಂದಲಿವುಗಳ। ಸೃಜಿಸಿ ಧರಿಸುವೆನೆಂದ ಮಾಧವ

॥ ೩ ॥

ಗಾಳಿ ಗಗನದೊಳಿರುವ ರೀತಿಯೊಳು। ಭೂತಗಳು ನನ್ನೊಳು।
ತೋರುವವು ನಿಜವಂತೆ ಸಕಲಗಳು ॥
ಪ್ರಕೃತಿಯನು ಹೊಂದವಶರಾದವು।ಗಳನು ಕಾಲದಿ ತಿರುಗಿ ಸೃಜಿಸುವೆ।
ಪ್ರಕೃತಿಯದು ನನ್ನೊಡೆಯತನದಲಿ। ಕೆಲಸ ಮಾಡುವದೆಂದ ಗೋವಳ

॥ ೪ ॥

ನರನೆ! ನರನೆಂದರಿಯಬೇಡೆನ್ನ। ನೀ ತಿಳಿದು ಮುನ್ನ।
ಸಕ್ತನಾಗದ ಕರ್ಮಗಳಲೆನ್ನ ॥
ಯಜ್ಞ ಮಂತ್ರಾಜ್ಯಾಗ್ನಿ ಸವಿಧ। ಬ್ರಹ್ಮ ವೇದ ಪ್ರಣವ ಸಾಕ್ಷಿಗ।
ಳಿದ್ದುದಿಲ್ಲಮದೆಲ್ಲ ನಾನೇ। ಜಗಕೆ ತಾಯಿಯು ತಂದೆಯೆಂದವ

॥ ೫ ॥

ವೇದವಿಹಿತ ಕ್ರತುವನಾಚರಿಸಿ। ಮನದೊಳಗೆ ನೆನಿಸಿ।
ಸ್ವರ್ಗದಾಸುಖಗಳನು ತಾ ಬಯಸಿ ॥
ಸ್ವರ್ಗಸುಖವನು ಸವಿದು ಪುಣ್ಯವು। ಮುಗಿದಮೇಲವ ಮೃತ್ಯುಲೋಕಕೆ।
ತಿರುಗಿ ಬಂದವ ಜನ್ಮಮರಣವ। ಹೊಂದುವನು ಕೇಳೆಂದ ಗೋವಳ

॥ ೬ ॥

ನಂಬಿ ಭಜಿಸುವರೆನ್ನನಾರವರ । ಬೆಂಬಿಡದೆ ನರರ ।
ರಕ್ಷಿಸುವೆ ನಾನನುದಿನವು ನೃವರ ॥
ಭಕ್ತನೆನ್ನನು ನಂಬಿದವನವ । ಪಾಪಿಯಾವರು ಹೊಂದದಿರ ನ ।
ನ್ನೆಂದಿಗಾದರು ಸಾಧುವಾದವ । ಬೇಗ ಹೊಂದುವನೆಂದ ಮಾಧವ

॥ ೭ ॥

ಸುರರೊಳಿತರರ ಪೂಜಿಸುವ ನರನು । ಅವನಾದರೆನ್ನನು
ಬೇರೆ ವಿಧದಲಿ ಪೂಜೆ ಮಾಳ್ಪವನು ॥
ಯಜ್ಞಗಳನುಂಬುವನು ನಾನೇ । ಪೂಜಿಸೆನ್ನನು ಹೊಂದು ಸುರಪಿತೃ ।
ಭೂತಪೂಜೆಯ ಗೈವ ಜನರವ । ರನ್ನು ಹೊಂದುವರೆಂದ ಯಾದವ

॥ ೮ ॥

ಭಕ್ತರಿತ್ತ ಸಮಸ್ತ ವಸ್ತುಗಳ । ಭುಂಜಿಸುವೆನವುಗಳ ।
ಪತ್ರ ಪುಷ್ಪ ಫಲೋದಕಾದಿಗಳ ॥
ಮಾಡಿದುಂಡುದ ಕೊಟ್ಟ ನೀ ಹೋ । ಮಿಸಿದ ವಸ್ತುವನೆಲ್ಲ ತಪವನು ।
ಗೈದ ಕರ್ಮವ ಭಕ್ತಿಯಿಂದೆನಗರ್ಪಿಸೆಂದ ಸುರೇಂದ್ರವಂದಿತ

॥ ೯ ॥

ನನ್ನೊಳಿಡು ಚಿತ್ತವನು ದೃಢವಾಗಿ । ನೀ ಶಿರವ ಬಾಗಿ ।
ನಮಿಸು ಹೋಮಿಸು ಬಿಡದಲೆನಗಾಗಿ ॥
ಭಜಿಸುತೆನ್ನನು ಭಕ್ತಿಯಿಂ ಭವ । ಬಂಧವನು ಕಳೆದೆನ್ನ ಹೊಂದುವಿ ।
ಮುಂದು ನಿನಗೀ ಬಂಧ ತಪ್ಪುವು । ದೆಂದ ಯದುವರನಂದನಗೆನಾ

## ॥ ವಿಭೂತಿ ಯೋಗ ॥

## ( ಅಧ್ಯಾಯ ೧೦ )

**ರಾಗ, ತಾಳ:—ಮೇಲಿನಂತೆ.**

॥ ೧ ॥
ಸಕಲ ಸೃಷ್ಟಿಯ ಮೂಲ ನಾನೆಂದು । ನನ್ನಿಂದಲೆಂದು ।
ಒಲ್ಲವನು ತಿಳಿದಿದನು ಮನದಂದು ॥
ಪ್ರಾಣ ಚಿತ್ತಗಳಿಟ್ಟು ನನ್ನೊಳ । ಗಾಡಿ ತಿಳಿಯುವ ಹೇಳಿ ನಲಿಯುವ ।
ಯೋಗಿಗೀವೆನು ಬುದ್ಧಿಯೋಗವ । ನವನು ಹೊಂದುವನನ್ನನೆಂದವ

॥ ೨ ॥
ಆದಿಮಧ್ಯಾಂತಗಳು ನಾನಾಗಿ । ಬಹು ರೂಪನಾಗಿ ।
ತೋರುವೆನು ಜಗದಾತ್ಮಮಯನಾಗಿ ॥
ಸುರನರೋರಗ ಯಕ್ಷ ರಾಕ್ಷಸ । ಪಕ್ಷಿ ವೃಕ್ಷ ಮಹರ್ಷಿ ಶೈಲಾ ।
ದಿಗಳಲುತ್ತಮವಾದ ಸಕಲವು । ನನ್ನ ತೇಜದಿ ಜನಿಸಿದೆಂದವ

॥ ೩ ॥
ಅಂತವಿಲ್ಲವಿಭೂತಿಗಳಿಗೆನ್ನ । ಪೇಳಿದೆನಿದನ್ನ ।
ಬೋಧಕಾಗಿಯೆ ನರನೆ ! ನಾನಿನ್ನ ॥
ವ್ಯಾಪಿಸೆಲ್ಲವ ನಾನಿರುವೆ ನನ । ಗೀಜಗವು ಒಂದಂಶವಾಗಿದೆ ।
ನಾಶವಿಲ್ಲದಲುಳಿದ ಮೂರಂ । ಶಗಳ ಮೀರಿಹೆನೆಂದ ಮುರಹರ

## ॥ ವಿಶ್ವರೂಪದರ್ಶನ ಯೋಗ ॥

## ( ಅಧ್ಯಾಯ ೧೧ )

**ರಾಗ, ತಾಳ:- ಸೋಲಿನಂತೆ.**

॥ ೧ ॥

ಧನ್ಯನಾದೆನು ಕೇಳಿ ನಿನ್ನಿಂದ । ಮನದೊಳಗೆ ನಿಂದ ।
ಮೋಹವಡಗಿತು ಹರಿಯೆ ಭರದಿಂದ ॥
ಜ್ಞಾನದಿಂ ಭೂತಗಳ ಸೃಷ್ಟಿ । ಪ್ರಳಯ ನಿನ್ನಿಂದೆಂಬುದರಿತೆನು ।
ವಿಶ್ವರೂಪವ ನಿನ್ನದನು ತೋ । ರೆಂದ ಪಾರ್ಥಗೆ ತೋರುವಾತನಿ

॥ ೨ ॥

ನೋಡು ನೀನೆಂದೆನುತ ಗೋವಿಂದ । ಬಹುರೂಪದಿಂದ ।
ವಿಶ್ವರೂಪವ ತೋರುತಿಂತೆಂದ ॥
ನೋಡು ವಿಧವಿಧನಾಮರೂಪದ । ಲೆನ್ನ ದೇಹದ ಸಕಲ ಭಾಗಗ ।
ಳಲ್ಲಿ ತೋರ್ಪ ಚರಾಚರಾತ್ಮಕ । ಜಗವನೆಂದ ಮಹೇಂದ್ರವಂದಿತ

॥ ೩ ॥

ನೋಡಲಾಗದು ನರನೆ! ನಿನ್ನಿಂದ । ಈ ಕಣ್ಣಿನಿಂದ ।
ನನ್ನ ರೂಪವ ನಿನ್ನ ಮುನ್ನಿಂದ ॥
ದಿವ್ಯನೇತ್ರವ ಕೊಡುವೆ ನೀನೋ । ಡೆನ್ನನೆಂದವಗಿತ್ತು ತೋರುವ ।
ವಿಶ್ವರೂಪವ ಧರಿಸಿ ನಾನಾ । ರೂಪದಿಂ ಮುನ್ನಿಂದ ಮಾಧವ

॥ ೪ ॥

ಬಹುವಿಧಾಕೃತಿ ವರ್ಣಕರ್ಣಗಳು | ಬಹುರೂಪ ಮುಖಗಳು |
ನೇತ್ರ ನಖ ರೋಮಾಂಘ್ರಿ ಕೇಶಗಳು ||
ವಿಧವಿಧಾಯುಧ ಭೂಷಣಾಂಬರ | ಪುಷ್ಪಗಂಧಾದಿಗಳ ಧರಿಸಿದ |
ಮೀರಿ ಗಗನವ ಸರ್ವತೋಮುಖ | ವಾಗಿ ತೋರುವ ಧೀರ ಯದುವರ

॥ ೫ ॥

ಸೂರ್ಯಕೋಟಿಗಳುದಯಿಸಿದ ತೆರದಿ | ತೋರ್ಪವಗೆ ಭರದಿ |
ನೋಡಲಚ್ಚರಿಯಾಗಿ ಮೂಜಗದಿ ||
ಭೇದವಾಗಿಹ ಜಗವನೆಲ್ಲವ | ನಿಟ್ಟು ತನ್ನೊಳು ತೋರಿಪಾತಗೆ |
ನರನು ಕೈಮುಗಿದೆಂದ ಮಾತನು | ಕೇಳುವಾತನಿಗಜನತಾತನಿ

॥ ೬ ॥

ದೇವತಾದಿಗಳೆಲ್ಲ ದೇಹದಲಿ | ಅಂಗಾಂಗಗಳಲಿ |
ತೋರುತಿವೆ ಬಹುರೂಪವಾಗಿಲ್ಲಿ ||
ಅಕ್ಷಿ ಕುಕ್ಷಿ ಮುಖೋರು ಪಾದಗ | ಳಳತೆಯಿಲ್ಲದ ವಿಶ್ವರೂಪವ |
ನೋಡಿ ಬುಡ ನಡು ಕೊನೆಯ ಕಾಣದೆ | ನಿಂತನರನನು ನೋಳ್ಪನರಹರಿ

॥ ೭ ॥

ಶಿರದಲಿಟ್ಟ ಕಿರೀಟಗಳಸಾಲು | ಹೆಗಲೊಳಗೆ ಶಾಲು |
ಚಕ್ರ ಗದೆಗಳ ತೊಟ್ಟ ಕೈತೋಳು ||
ಉರಿವ ಕಿಚ್ಚಿನ ತೆರೆದಲಕ್ಷಿಯ | ಕುಕ್ಕುವಂತಹ ಕಾಂತಿಯುತ ಸೂ |
ರ್ಯಾಗ್ನಿ ದೀಪ್ತಿಯ ದೇಹವನು ಧರಿ | ಸೀಕ್ಷಿಸುವ ಸರ್ವಾತ್ಮನಿಗೆ ನಾ

॥ ೮ ॥

ದಿಗ್ಧರಾ ಗಗನಾದಿಗಳನೆಲ್ಲ । ಸೇರಿರುವಿಯಲ್ಲ ।
ನೋಡಲದ್ಭುತ ರೂಪ ಜಗಕೆಲ್ಲ ॥
ನಿನ್ನದಾಗಿದೆ ಸಿದ್ಧ ಸುರಮುನಿ । ಜನಗಳೊಂದೆಡೆ ನುತಿಘುತಿರ್ಪರು ।
ಸಾಧ್ಯ ರುದ್ರಮರುದ್ಗಣಾದಿಗ । ಳಿಂದ ನರನನು ನೋಡುವಾತನಿ

॥ ೯ ॥

ಕ್ರೋರೆ ದಾಡೆಗಳಿಂದ ಭೀಕರವು । ಹರಿ ನಿನ್ನ ಮುಖವು ।
ನೋಡಲಸದಳ ಬಹಳವಾಗಿಹವು ॥
ಸೇರುತಿರುವನು ನಿನ್ನ ಮುಖವನು । ವೀರ ಕುರುಪತಿ ತನ್ನ ಬಲವನು ।
ಕರ್ಣ ಭೀಷ್ಮ ದ್ರೋಣರನು ಕೂ । ಡೆಂದ ಪಾರ್ಥನ ನೋಡಿ ನಗುವವ

॥ ೧೦ ॥

ನದಿಯು ಜಲಧಿಯ ಸೇರುವಾತೆರದಿ । ಭಟರೆಲ್ಲ ಮುಖದಿ ।
ಸೇರಿ ಶಿರ ಮುಂದಾಗಿ ಬಹು ಭರದಿ ॥
ದಂತ ಯಂತ್ರದಿ ಚೂರ್ಣವಾಗುವ । ಕರ್ಣ ಭೀಷ್ಮ ದ್ರೋಣ ಕೌರವ ।
ರವನಿಪಾಲರ ತನ್ನ ಯೋಧರ । ನೋಡಿ ನಡುಗುವ ನರನ ನೋಳ್ಪವ ।

॥ ೧೧ ॥

ಮುಕ್ಕುವಂದದಿ ಜಗವ ಜವದಿಂದ । ನೀ ಮುಖಗಳಿಂದ ।
ಘೋರ ರೂಪದಿ ದೇವ ಮುನ್ನಿಂದ ॥
ತೇಜ ನಿನ್ನದು ಮೂರು ಜಗವನು । ಮೀರಿಹುದು ನೀನರುಹು ಯಾರೆಂ ।
ಬುದನು ತಿಳಿಯುವೆನೆಂದು ನಮಿಸಿದ । ನರನ ನೋಡುತ ನುಡಿಯುವಾತನಿ

॥ ೧೨ ॥

ಯುದ್ಧ ಮಾಡಲು ಸಿದ್ಧನಾಗೀಗ । ಮೂಜಗವ ಬೇಗ ।
ನಾಶ ಮಾಡಲು ಕಾಲನಿಹೆನೀಗ ॥
ಹೊರತು ನಿನ್ನನು ಸುತ್ತು ನಿಂತಿಹ । ನೃಪರು ಸತ್ತಿಹರೆಂದು ತಿಳಿ ನೀ ।
ವಿಜಯ! ವಿಶ್ವವನಾಳಿ ಬಾಳು ನಿ । ಮಿತ್ತ ನೀನಿದಕೆಂದ ಕೃಷ್ಣನಿ

॥ ೧೩ ॥

ಆಡಿದಾ ನುಡಿ ಕೇಳಿ ನಡುಗುತ್ತ । ಕೈಮುಗಿದು ಮತ್ತಾ ।
ಪಾರ್ಥ ನುತಿಸಿದನಾಗ ನುಡಿಯುತ್ತ ॥
ಸತ್ಯವೈ ಸುಂದರವು ನಿನ್ನಯ । ಕೀರ್ತಿ ಜಗಕಾನಂದದಾಯಕ ।
ಸಿದ್ಧನುತ! ಸಕಲಾರ್ತಿಹರ! ಸಲ । ಹೆಂದ ಪಾರ್ಥನ ಪಾಲಿಸಿದ ಹರಿ

॥ ೧೪ ॥

ದೇವ ದೇವರಿಗಾದಿ ಮೂಜಗಕೆ । ಮಹದಾದಿ ವಿಶ್ವಕೆ ।
ಹೇತುವಾಗಿಹೆ ಜಗದೊಳೆಲ್ಲವಕೆ ॥
ತಿಳಿಯಲುತ್ತಮನು ನೀನೆ ತಿಳಿವವ । ವಿಶ್ವವನು ತುಂಬಿಹನು ಸಿದ್ಧರಿ ।
ಗುತ್ತಮಾಸ್ಪದನೆಂದ ಪಾರ್ಥನ । ರಕ್ಷಿಸಲು ಮುನ್ನಿಂದ ಮುರಹರ

॥ ೧೫ ॥

ವಾಯು ವರುಣ ಶಶಾಂಕ ರವಿ ನೀನೇ । ನಿಋತಿಯು ನೀನೇ ।
ಹರಿಹರಾಜ ಮಹೇಂದ್ರ ಯಮ ನೀನೇ ॥
ಇಲ್ಲದೇ ನೀನಿಲ್ಲ ವಿಶ್ವವಿ । ದೆಲ್ಲವೆಲ್ಲೆಂದೆಡೆಗು ವಂದಿಪೆ ।
ಹಿಂದೆ ಮುಂದೆಯು ಕೆಳಗೆ ಮೇಲೆಂ । ದೆನದೆ ನಮಿಸುವ ನರನನೋಲ್ವನ

॥ ೧೬ ॥

ಮಿತ್ರ ನೀನೆಂದರಿತು ನಾ ಮುನ್ನ । ಮಹಿಮೆಯನು ನಿನ್ನ ।
ದರಿಯದಾಡಿದ ಬಹಳ ಮಾತೆನ್ನ ॥
ಗೊಲ್ಲನೆಂದು ತಿರಸ್ಕರಿಸಿ ನಾ । ನಾಡಿದುದ ನೀ ಕ್ಷಮಿಸು ತಪ್ಪನು ।
ಭೋಜನಾಶನ ಶಯನಕಾಲದ । ಲೆಂದ ಮಾತಾಲಿಸುತ ನಗುವವ

॥ ೧೭ ॥

ತಂದೆ ನೀನೇ ಜಗಕೆ ಗೋವಿಂದ । ವಸುದೇವ ಕಂದ ।
ಹಿರಿಯರನ್ಯರನರಿಯೆ ನಿನ್ನಿಂದ ॥
ಮೂರು ಜಗದೊಳಗೆಂದು ಶಿರವನು । ಬಾಗಿ ಬೇಡುವೆ ತಂದೆ ಕಂದನ ।
ತೆರದಿ ನೀ ಕ್ಷಮಿಸೆಂದ ಪಾರ್ಥನ । ಮಾತ ಲಕ್ಷಿಸಿ ರಕ್ಷಿಸಿದ ಹರಿ

॥ ೧೮ ॥

ಎಂದು ನೋಡದ ನಿನ್ನದೀರೂಪ । ನೋಡೆನಗೆ ತಾಪ ।
ಹರುಷವಾಯಿತು ಮನಕೆ ಬಹುರೂಪ ॥
ಶಾಂತವಾಗಿಹ ನಾಲ್ಕು ತೋಳಿನ । ಶಂಖಚಕ್ರಗದಾಬ್ಜಗಳ ಧರಿ ।
ಸಿರುವ ಮೊದಲಿನರೂಪವನು ತೋ । ರೆಂದ ಪಾರ್ಥಗೆ ತೋರಿದಾತನಿ

॥ ೧೯ ॥

ಒಲಿದು ತೋರಿದೆ ವಿಶ್ವರೂಪವನು । ನಿನಗೀಗಲಿದನು ।
ಯೋಗಿಯಾದವ ಬೇಗ ತಿಳಿವುದನು ॥
ವೇದ ಯಜ್ಞಾಧ್ಯಯನ ದಾನ ತ । ಪಕ್ರಿಯಾದಿಗಳಿಂದಲನ್ಯರು ।
ತಿಳಿಯಲಾರದ ರೂಪವನು ತೋ । ರಿದೆನು ಬೆದರದಿರೆಂದ ನರಹರಿ

॥ ೨೦ ॥

ಸೌಮ್ಯರೂಪವ ಹೊಂದಿನಗಧರನು । ನರನೆಂದ ಮಾತನು ।
ಕೇಳಿ ತಾ ದಯೆಯಿಂದ ಮಾಧವನು ॥
ನೋಡಲಮರರು ಬಯಸುವೀ ರೂ । ಪವನು ಭಾವಿಸುತಿವಗೆ ಕರ್ಮಗ।
ಳರ್ಪಿಸೆನ್ನೊಳು ಸೇರಿ ಸುಖಿ ನೀ । ನಾಗು ನರನೆಂದಾಮುಕುಂದನಿಗೆ

॥ ಭಕ್ತಿಯೋಗ ॥

( ಅಧ್ಯಾಯ ೧೨ )

**ರಾಗ, ತಾಳ:- ಮೇಲಿನಂತೆ.**

॥ ೧ ॥

ಭಕ್ತಿಯಿಂ ಸೇವಿಸುವ ಮಾನವನು । ಮನಮುಟ್ಟಿ ನನ್ನನು ।
ಯೋಗಿಗಳಲವನುತ್ತಮೋತ್ತಮನು ॥
ಇದ್ದು ಸಕಲದೊಳಿದ್ದು ಕಾಣದ । ಕೇಳಿತಿಳಿಯದ ನಾಶವಿಲ್ಲದ ।
ನನ್ನ ತಿಳಿಯುವ ಮನವ ಹೃದಯದಿ । ನಿಲಿಸು ಚಲಿಸದ ತೆರದಲೆಂದವ

॥ ೨ ॥

ಇದ್ದು ಸಕಲದಲಿದ್ದುಕಾಣದದು । ತಾನದನು ತಿಳಿವುದು ।
ದೇಹಧಾರಿಗೆ ದುಃಖವೆನಿಸುವದು ॥
ಧ್ಯಾನಿಸುವರಾರೆನ್ನ ಹೃದಯದ । ಲನ್ಯಭಾವವ ಬಿಟ್ಟು ಮನದಿಂ ।
ದವರ ನಾನುದ್ಧರಿಸಿ ಸಲಹುವೆ । ಜನನ ಮರಣಗಳಿಂದಲೆಂದವ

॥ ೩ ॥

ಬುದ್ಧಿ ಮನಗಳನಿಟ್ಟು ದೃಢವಾಗಿ । ನನ್ನಲ್ಲಿ ಯೋಗಿ।
ಯಾಗಿ ಕರ್ಮಗಳೆಸಗು ನನಗಾಗಿ ॥
ಜ್ಞಾನ ಮೇಲಭ್ಯಾಸಕಿಂತಲು । ಧ್ಯಾನವದಕುತ್ತಮವು ಫಲಗಳ।
ತ್ಯಾಗ ಮೇಲಿದ ತಿಳಿದು ಶಾಂತಿಯ। ಪಡೆದು ಹೊಂದುವಿ ನನ್ನನೆಂದವ

॥ ೪ ॥

ಎಲ್ಲ ಜನರಿಗು ಮಿತ್ರನಾದವನು । ನಿತ್ಯದಲಿ ತುಷ್ಟನು ।
ದುಃಖ ಸುಖಗಳ ಲಕ್ಷಿಸಿದ ನರನು ॥
ದ್ವೇಷ ಹರ್ಷಾಸೂಯೆ। ಮನದು।ದ್ವೇಗ ಭಯಗಳ ಬಿಟ್ಟು ಮತಿಮನ।
ಗಳನು ನನ್ನೊಳಗಿಟ್ಟ ಭಕ್ತನು । ಹೆಚ್ಚಿನವ ನನಗೆಂದ ಮಾಧವ

॥ ೫ ॥

ಜಗಕೆ ಬೆದರನದಾವ ಮಾನವನು । ಬೆದರಿಸನು ಜಗವನು ।
ವೈರ ಶೋಕಾದಿಗಳನಳಿದವನು ॥
ಶೀತ ಬಿಸಿ ಮಾನಾಪಮಾನ ಶು । ಭಾಶುಭ ಸ್ತುತಿ ನಿಂದೆ ಮಿತ್ರಾ ।
ರಿಗಳಲಾವನು ಸಮನು ಶುದ್ಧನು । ಭಕ್ತನವ ಮೇಲೆಂದ ಮಾಧವ

॥ ೬ ॥

ಇಚ್ಛೆಯನು ತೊರೆದಾವ ಮಾನವನು । ಮಾಡುತ್ತಲವನು ।
ತನ್ನದಾಗಿಹ ಸಕಲ ಕರ್ಮವನು ॥
ಸಕ್ತನಾಗದೆ ಸಕಲದಾರಂ । ಭವನು ಬಿಟ್ಟಿಹ ಮೌನಿ ಮನೆಮಠ ।
ಗಳನು ತೊರೆದವ ಪರಮ ಭಕ್ತನು । ಪಾರ್ಥ ನನಗವನೆಂದ ಮಾಧವ

## ॥ ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಯೋಗ ॥

## ( ಅಧ್ಯಾಯ ೧೩ )

**ರಾಗ:- ಸಾರಂಗ. (ಅಷ್ಟತಾಳ)**

ಎತ್ತುವೆನಾರತಿಯ । ಮುರಾರಿಗೆ । ಹರುಷದಿ ಪರಿಪರಿಯ ॥ ಪಲ್ಲ ॥

ರಥದಿ ಸಾರಥಿಯಾಗಿ ಕುಳಿತು ತಾ ಗೀತೆಯ ।
ಪಾರ್ಥನಿಗರುಹಿದ ಯಾದವ ಕುವರ ನೀ ॥ಅ. ಪ.॥

ಕ್ಷೇತ್ರವೆಂದರೆ ದೇಹ । ವಿದ ತಿಳಿದವ ನೀ । ನೆಂಬುದ ನೊದಲರಿತು ।
ಕ್ಷೇತ್ರವು ತಿಳಿದವ । ನೆರಡು ತಾನೊಬ್ಬನಾ । ಗಿಹನೆಂಬುದರ ಕುರಿತು ॥
ಮನನ ಮಾಡರಿತು ನೀ । ನಾರೆಂಬುದನು ತಿಳಿ ।
ದಾತ್ಮಪದವ ಹೊಂದಿ । ನಲಿಯುವಿಯೆಂದವ ॥ ೧ ॥

ಭೂತಗಳೈದನು । ಚೇತನ ಮತಿಮನ । ಸುಖ ದುಃಖ ವೈರಗಳ ।
ಜ್ಞಾನ ಕರ್ಮಗಳೆಂಬ । ಇಂದ್ರಿಯ ದಶಕವ । ನಿಚ್ಛೆಯನವ್ಯಕ್ತವ ॥
ಧೃತಿಯನು ನಾನೆಂಬು । ದನು ಕೂಡಿದೀ ದೇಹ ।
ನಿಜವಲ್ಲ ನರನೆ ಕೇ । ಳೆಂದ ಗೋಪಾಲನಿ ॥ ೨ ॥

ಇಷ್ಟಾನಿಷ್ಟಗಳಲ್ಲಿ। ಸಮನಾಗಿ ನನ್ನಲ್ಲಿ ಭಕ್ತಿಯನಿಡುವಿಕೆಯು ।
ನಸಂಗಜರಹಿತವಾ। ದಂತರಂಗದಿ ಕುಳಿ। ತೆನ್ನ ಭಾವಿಸುವಿಕೆಯು ॥
ಅದ್ಯಾತ್ಮ ವಿದ್ಯೆಯಿ । ದೆನ್ನನು ತಿಳಿಯಲು ।
ಸಾಧನವಾಗುನದೆಂದ ಯತೀಂದ್ರನಿ ॥ ೩ ॥

ಹಿಂಸಾಹಮಿಕೆ ದಂಭ। ಮಾನಗಳಳಿದು ಕ್ಷ। ಮಾರ್ಜವಗಳ ತಳೆದು ।
ಜನ್ಮ ಮರಣ ಮುಪ್ಪು। ರೋಗಗಳಲಿ ದುಃಖ। ದೋಷಗಳೆಣಿಸದುದು ॥
ಹೆಂಡತಿ ಮನೆಮಕ್ಕ । ಳಾದಿಗಳಲಿ ವೈ ।
ರಾಗ್ಯವೆ ಜ್ಞಾನಕ್ಕೆ ಸಾಧನವೆಂದವ ॥ ೪ ॥

ಆದಿಯಿಲ್ಲದ ಬೊಮ್ಮ। ಇದೆಯೆಂಬುದಲ್ಲದು। ಇಲ್ಲವೆಂಬುವದಲ್ಲದು ।
ಎಲ್ಲದರೊಳು ಸೇರಿ। ಧರಿಸದಲವುಗಳ। ಗುಣಗಳ ತಾನಿಹುದು ॥
ಸೂಕ್ಷ್ಮವು ತಿಳಿಯುವ । ತೆರವದು ಗುಣಗಳ ।
ನನುಭವಿಸುವದೆಂದ । ನಂದ ನಂದನಗೆ ನಾ ॥ ೫ ॥

ಸೃಜಿಸಿ ಸಂಹರಿಸುವ । ದೆಲ್ಲೆಡೆಗಳಲಿದ್ದು । ಭಾಗವಾಗಿರದಲದು ।
ಕತ್ತಲೆಯಾಚೆಗೆ । ಬೆಳಕಿಗು ಬೆಳಕಾಗಿ । ಸಕಲವ ಬೆಳಗುವದು ॥
ಸರ್ವರ ಹೃದಯದ । ಲರಿವು ತಾನರಿಯುವ ।
ರೂಪ ನಾನೆಂಬುವ । ದಕು ಮೂಲವೆಂದವ ॥ ೬ ॥

ಪ್ರಕೃತಿಯುಪುರುಷನೆಂ।ಬೆರಡುಅನಾದಿಯಾ।ದದರೊಳುಮೊದಲಾದುದು
ಸೃಜಿಸುವದೆಲ್ಲವಿ । ಕಾರ ಗುಣಗಳನು । ಹೇತುವೆಂದೆನಿಸುವದು ॥
ಕಾರ್ಯ ಕಾರಣ ಕರ್ತೃ । ಗಳಿಗೆಲ್ಲ ಪುರುಷನು ।
ಹೇತುವು ಸುಖದುಃಖ । ಭೋಗಕೆಂದವಗೆ ನಾ ॥ ೭ ॥

ಪ್ರಕೃತಿಯೊಳಗೆ ಸೇರಿ।ಪುರುಷನು ಪ್ರಕೃತಿಯಿಂ।ದುಂಟಾದಗುಣಗಳನು।
ಭೋಗಿಸಿ ಸಂಗಕ್ಕೆ । ಗುರಿಯಾಗಿ ಜನ್ಮವ । ನೆತ್ತುತಲಿರುತಿಹನು ॥
ಸಾಕ್ಷಿಯಾಗೊಬ್ಬನೆ । ಲ್ಲರ ದೇಹದೊಳಗಿದ್ದು ।
ಪರಮಾತ್ಮನುತ್ತಮ । ಪುರುಷ ಬೇರೆಂದವ ॥ ೮ ॥

ಸ್ಥಾವರ ಜಂಗಮ । ವಾದ ವಸ್ತುಗಳೆಷ್ಟು । ಹುಟ್ಟಿವೆ ಜಗದೊಳಗೆ ।
ಕ್ಷೇತ್ರವನದ ತಿಳಿ । ವವನ ಕೂಡಾದವೆಂ । ಬುದ ತಿಳಿ ಮನದೊಳಗೆ ॥
ಕ್ಷೇತ್ರವೆಂಬುದು ನಿಜ । ವಲ್ಲವಿದನು ತಿಳಿ ।
ದವನು ನಿಜನು ನಿರ್ವಿ । ಕಾರನೆಂದಾತನಿ ॥ ೯ ॥

ಒಬ್ಬನಾದಾತ್ಮನೆ । ಹಲವಾಗಿ ಕಾಣುವ । ಗಗನದ ತೆರದಲವ ।
ಸೂಕ್ಷ್ಮವಾಗೆಲ್ಲದ । ರೊಳಗಿದ್ದರವುಗಳ । ಗುಣವ ಸ್ವೀಕರಿಸನವ ॥
ಕ್ಷೇತ್ರದಲಿದ್ದದ । ತಿಳಿವವನಾಗಿದ್ದು ।
ಬೆಳಗುವನದನು ನೀ । ತಿಳಿಯೆಂದ ಗೋವಿಂದ ॥ ೧೦ ॥

## ॥ ಗುಣತ್ರಯ ವಿಭಾಗ ಯೋಗ ॥

### ( ಅಧ್ಯಾಯ ೧೪ )

**ರಾಗ, ತಾಳಃ- ಮೇಲಿನಂತೆ.**

ಯೋನಿಯು ನನ್ನದು । ಬಹು ದೊಡ್ಡದಾಗಿಹು । ದದರಲ್ಲಿ ಗರ್ಭವನು ।
ಧರಿಸಿನಾನದರಿಂದ । ಭೂತಗಳೆಲ್ಲವ । ಸೃಜಿಸುವ ತಂದೆ ನಾನು ॥
ಯೋನಿಗಳಲಿ ಬ್ರಹ್ಮ । ದೊಡ್ಡದಾಗಿಹ ಯೋನಿ ।
ಯದರಿಂದ ದೇಹಗ । ಳಾದವೆಂದನಗೆ ನಾ ॥ ೧ ॥

ಪ್ರಕೃತಿಯಲುಂಟಾದ । ಸತ್ವ ರಜ ಸ್ತಮ । ಗುಣಗಳು ಮನುಜನನು ।
ಬಾಧಿಸಿ ಸುಖ ದುಃಖ । ಮೋಹಾದಿಗಳಿಗಿವು । ಗುರಿಗೈವುದೆಂಬುದನು ॥
ತಿಳಿದು ನೀ ಪರಮಾತ್ಮ । ನವುಗಳ ಮೀರಿಹ ।
ನೆಂದು ಹೊಂದುವಿ ನನ್ನ । ನೆಂದ ಮುಕುಂದನಿ ॥ ೨ ॥

ಗುಣ ಧರ್ಮವಾಗಿಹ । ಸುಖದುಃಖಗಳನೆಲ್ಲ । ದ್ವೇಷಿಸದಾಶಿಸದೆ ।
ಗುಣಗಳ ಕೃತಿಯೆಂದು । ತಿಳಿದಿದ ಚಲಿಸದ । ಲವಕೆ ನೀ ವಶನಾಗದೆ ॥
ಮಿತ್ರಾರಿಕನಕ ಮೃ । ತ್ತಿಕೆಗಳ ಸಮವಾಗಿ ।
ತಿಳಿದವ ಗುಣಗಳ । ನಳಿದವನೆಂದವ ॥ ೩ ॥

ಸಕಲದರಾರಂಭ । ದೊಳಗಹಮಿಕೆಯ ತಾ । ನಿಡದಲೆನ್ನನು ಬಿಡದೆ ।
ಭಕ್ತಿಯಿಂ ಭಜಿಸುತ್ತ । ಲಿರುವಾತ ಹೊಂದುವ । ನೆಂದಿಗಾದರು ಬಿಡದೆ ॥
ಶಾಶ್ವತ ಸುಖರೂಪ । ವಾಗಿಹ ಧರ್ಮಕು ।
ಮೂಲವಾಗಿಹ ಪರ । ಮಾತ್ಮ ತಾನೆಂದವ ॥ ೪ ॥

॥ ಪುರುಷೋತ್ತಮ ಯೋಗ ॥

( ಅಧ್ಯಾಯ ೧೫ )

ರಾಗ, ತಾಳ:- ಮೇಲಿನಂತೆ.

ಬ್ರಹ್ಮವೆಂಬುವ ಬುಡ । ಮೇಲಾಗಿ ನಿಂತಿಹ । ಕೆಳಗೆ ಕೊಂಬೆಗಳಿರುವ ।
ವೇದಗಳೆಲೆಯುಳ್ಳ । ವಿಷಯವೆ ಚಿಗುರುಳ್ಳ । ಗುಣದಿಂದ ಬೆಳೆದಿರುವ ।
ಕೆಳಗು ಮೇಲೆಯು ಹಬ್ಬಿ । ಕರ್ಮ ಬಂಧಿತವಾದ ।
ಸಾವ ಸಂಸಾರವಿ । ದಶ್ವತ್ಥವೆಂದವ ॥ ೧ ॥

ಅರಿಯದಜನರಿದ । ರಂತವ ತಿಳಿಯದೆ । ನಿಜವೆಂದು ಭಾವಿಸಿದ ।
ಗಟ್ಟಿಯಾಗೂರಿದ । ಬೇರುಳ್ಳ ಹಬ್ಬಿದ । ಬುಡನಡು ಕೊನೆಯಿಲ್ಲದ ॥
ಅಶ್ವತ್ಥಮೂಲದ । ಲಿಹುದಾತ್ಮವಿದನು ನೀ ।
ಸಾಧಿಸಿ ತಿಳಿವುದ । ಹೇಳ್ವೆನೆಂದವಗೆ ನಾ ॥ ೨ ॥

ನಿಃಸಂಗವೆಂಬುವ | ಕೊಡಲಿಯಿಂ ಕಡಿದಿದ | ಹುಡುಕಿನೋಡಿದನರನು|
ಜಾಣರಾವುದ ಸೇರಿ | ತಿರುಗಿ ಬಾರರು ಭವ | ಕಾನಂದವಾದುದನು ||
ಪ್ರಕೃತಿಗು ಹೇತುವಾ | ದಾತ್ಮವಸ್ತುವನವ |
ತಿಳಿದು ಹೊಂದುವ | ನಾತ್ಮಪದವನೆಂದವಗೆ ನಾ || ೩ ||

ಸುಖದುಃಖಮಾನಾಭಿ | ಮಾನಮೋಹಗಳಳಿ | ದಾತರುಹೊಂದುವದು|
ಬೆಳಗಲಾರವು ಜೆಂಕಿ | ರವಿಚಂದ್ರರಾವುದ | ನವುಗಳ ಬೆಳಗುವದು ||
ಸ್ಥಾನವದೆನ್ನದು | ಯೋಗಿ ತನ್ನೊಳಗೆ ತಾ |
ತಿಳಿವನಲ್ಲದೆ ಮೂಢ | ರರಿಯರೆಂದಚ್ಯುತ || ೪ ||

ಕಿವಿಕಣ್ಣು ಚರ್ಮ ನಾಲಿಗೆ ಮೂಗು ಮನಗಳ|ವಶವಾಗಿವಿಷಯಗಳ|
ನುಣ್ಣುತ್ತ ನನ್ನಂಶ | ವಾಗಿಹ ಜೀವವು | ಗಾಳಿಯು ವಸ್ತುಗಳ ||
ಗಂಧವ ಕೂಡಿ ಸಂ | ಚರಿಸುವ ತೆರದಲಿ |
ದೇಹಗಳನು ಹೊಂದಿ | ಚರಿಸುವದೆಂದವ || ೫ ||

ಅಗ್ನಿ ಚಂದ್ರಾರ್ಕರ | ಲಿಹ ತೇಜ ನನ್ನದು | ಸೇರಿನಾ ಧರಣಿಯನು |
ಧರಿಸಿಹೆ ಸಕಲ ಭೂ | ತಗಳನು ಸೋಮನಾ | ಗೋಷಧಿ ವರ್ಗವನು ||
ಪೋಷಿಸಿ, ಪ್ರಾಣಿಶ | ರೀರದಲನ್ನವ |
ಬೆಯಿಸುವ ಜೆಂಕಿ | ವೈಶ್ವಾನರನೆಂದವ || ೬ ||

ವೇದದಿಂದರಿಯುವ | ವೇದವ ತಿಳಿದಿಹ | ಕವಿ ಸರ್ವಹೃದಯದಿಹ |
ಪರಮಾತ್ಮ ನಾನಿಹೆ | ನನ್ನಿಂದಲಜ್ಞಾನ | ಜ್ಞಾನಸ್ಮೃತಿಗಳೆನ್ನುವ ||
ವಾದವವುಗಳೊಳು | ಜ್ಞಾನವ ಸಾಧಿಸಿ |
ನೀ ನನ್ನ ತಿಳಿಯುವಿ | ಹೃದಯುದಲೆಂದವ || ೭ ||

ಭೂತಗಳೆಲ್ಲವು | ಕ್ಷರಪುರುಷನು ಜೀವ | ನಕ್ಷರಪುರುಷನೆಂದು |
ನಾಶರಹಿತನವ | ನುತ್ತಮ ಪುರುಷನು | ಮೀರಿಹನೆರಡನಿಂದು ||
ಧರಿಸಿ ಮೂಲೋಕವ | ನಾಳುವ ಪರಮಾತ್ಮ |
ನೆಂಬವನಾಗಿಹೆ | ನಾನೆಂದ ಮಾಧವ || ೮ ||



||ದೈವಾಸುರ ಸಂಪದ್ವಿಭಾಗ ಯೋಗ||

( ಅಧ್ಯಾಯ ೧೬ )

ರಾಗ, ತಾಳ:— ಮೇಲಿನಂತೆ

ಅಸುರ ದೈವಗ | ಳೆರಡು ಸಂಪತ್ತುಗ | ಳದರಲುತ್ತಮ ದೈವವು |
ಬಂಧಕ್ಕೆ ಕಾರಣ | ವಾಗುವದಾಸುರ | ಮುಕ್ತಿಗಹುದು ದೈವವು ||
ಶೋಕವ ಬಿಡು ದೈವ | ಸಂಪದಗಳ ಕೂಡು |
ಹೇಳುವೆನವುಗಳ | ಭೇದವನೆನುವವ | ೧ |

ಸ್ವಾಧ್ಯಾಯಯಜ್ಞದ | ಯಾರ್ಜವದಮದಾನ | ಮಾರ್ದವಶಾಂತಿಗಳು |
ಜ್ಞಾನಯೋಗದಲಿರು | ವಿಕೆ ಸತ್ವಶುದ್ಧಿಯು | ಕ್ಷಮೆ ತೇಜಲಜ್ಜೆಗಳು ||
ಸತ್ಯ ಕ್ಷಮಾಧೃತಿ | ತ್ಯಾಗ ತಪಾದಿಗ |
ಳಿವುದೈವ ಸಂಪದ | ವೆಂದ ಮುಕುಂದನು || ೨ ||

ವಿಷಯದಲಾಸಕ್ತಿ | ಭಯ ಹಿಂಸೆ ಚಾಪಲ್ಯ | ರೋಷಾಭಿಮಾನಗಳು |
ದ್ರೋಹ ದರ್ಪಾಜ್ಞಾನ | ದಂಭ ದುರ್ಜನತನ | ಕ್ರೂರತನಾದಿಗಳು |
ಆಸುರ ಸಂಪದ | ವಿವುಗಳನೆಲ್ಲ ನೀ |
ಬಿಟ್ಟು ನೋಡಿದರೆನ್ನ | ತಿಳಿಯುವಿಯೆಂದವ || ೩ ||

ತಿಳಿಯಲಿಲ್ಲವನು ಪ್ರ | ವೃತ್ತಿಯ ತತ್ವವ | ನಾಸುರ ಗುಣದವನು |
ನರನು ನಿವೃತ್ತಿಯ | ನರಿಯನಂತೆಯೆ ಸತ್ಯ | ಶುದ್ಧಿಯಿಲ್ಲದಲವನು ||
ಹೊಂದನೆನ್ನನು ಜಗ | ಕೀಶನಿಲ್ಲೆಂದವ |
ನಾಶವನ್ನೈದುವ | ನೆಂದ ಯೋಗೀಂದ್ರನು || ೪ ||

ಭೂತ ಸಂಯೋಗವೆ | ಸೃಷ್ಟಿಗೆ ಕಾರಣ | ವೆಂಬುದನರಿಯದವ |
ಸತ್ಯವಾಗಿಹ ಮೂಲ | ವಸ್ತುವೊಂದಿದೆ ಜಗ | ಕೆಂಬುದ ನಂಬದವ |
ಕಾಮವೆ ಹೇತುವೆಂ | ದರಿದಾತ ಮತಿಹೀನ |
ನಾಚಾರ ರಹಿತನೆ | ನ್ನನು ಹೊಂದನೆಂದವ || ೫ ||

ಮದಥಂಭಮಾನದಿಂತುಂಬಲಾಗದಕಾಮ।ವನುತುಂಬಿಸುಖಿಯಾಗಲು।
ಕ್ರೂರ ಕರ್ಮವ ಮಾಡಿ।ವಿಶ್ವಕಹಿತನಾಗಿ । ಬಾಳುವ ಲೋಕದೊಳು ॥
ಪ್ರಳಯದವರೆಗಿನ । ಕೆಟ್ಟ ಕಾಮನೆಗಳ।
ಬಯಸುತಲಶುಚಿಯಾ। ಗವ ಸಾವನೆಂದವ ॥ ೬ ॥

ಕಾಮೋಪಭೋಗಕೆ। ಕಾಡುತ ಜನರನ। ನ್ಯಾಯದಿಂದರ್ಥವನು।
ಗಳಿಸುತ ಮಿತಿಮೀರಿ । ದಾಶೆಪಾಶಗಳಿಂದ। ಬದ್ಧನಾಗಿಹ ನರನು।
ಕಾಮ ರೋಷಗಳಿಂದ । ಘೋರ ಕೃತಿಯಗೈದು ।
ಪಾಪಿಯಾಗವ ಸಾವ। ನೆಂದ ರಮಾಧವ ॥ ೭ ॥

ಪಡೆದೆನಾನಿದನಿಂದು। ಪಡೆಯುವೆನದನೆಂದು। ಪೇಳುತ್ತಲುಂಟದೆಂಮು।
ಪಡೆಯಬೇಕಿನ್ನೊಂದ।ವೈರಿಯೊಬ್ಬನ ಕೊಂದೆ।ನಿತರರ ಕೊಲುವೆನೆಂದು।
ದೊಡ್ಡವನಾಗಿಹೆ। ಜನರೆನ್ನ ಬಲಕಿಂದು ।
ನನಗಾರು ಸರಿಯೆಂದು । ಸಾವನೆಂಬುವ ಹರಿ ॥ ೮ ॥

ಜಗದೊಳುಬಲವಂತ।ಭೋಗಿನಾನೊಡೆಯನು।ಸುಖಿಯೀಗಲೆನುತವನು।
ಸುರರಿಗು ನರರಿಗು। ಕೊಡುವವನನ್ನವ। ತಾನೆಂದು ತಿಳಿದವನು ॥
ಕಾಮಭೋಗಕೆ ಸಿಕ್ಕಿ । ಮೋಹಜಾಲದಿ ಬಿದ್ದು ।
ಹೊಂದುವ ನರಕವ । ನವನೆಂದ ಮಾಧವ ॥ ೯ ॥

॥ ೧೦ ॥

ಘನಮಾನ ಮದದಿಂದ । ಮೂಢನಾಗಿಹ ತಾನು । ಸಜ್ಜನನೆಂದೆನುತ ।
ಮನಕೆ ಬಂದಂತೆಯೆ । ವಿಧಿಹೀನವಾಗಿಯೆ । ಕರ್ಮವನವಗೈಯುತ ॥
ದಂಭದಿಂದಹಮಿಕೆ । ಬಲ ಗರ್ವ ರೋಷಗ ।
ಳಿಂದಲಾಸುರನಾಗಿ । ಸಾವನೆಂದವಗೆ ನಾ

॥ ೧೧ ॥

ತನ್ನೊಳಿತರರಲ್ಲು । ವಾಸವಾಗಿಹೆ ನಾ । ನೆಂಬುದ ಮರೆತವರು ।
ದ್ವೇಷಿಸುತೆನ್ನನು । ದುಷ್ಟ ಯೋನಿಗಳಲ್ಲಿ । ಹುಟ್ಟಿ ಸಾವರು ಜನರು ॥
ಕ್ರೂರರಾದವರನು । ಘೋರ ಸಂಸಾರದಿ ।
ಬಿಡದೆ ನಾ ಕೆಡಹುವೆ । ನೆಂದ ಗೋವಿಂದನ

॥ ೧೨ ॥

ಬಾಗಿಲುಗಳು ಮೂರು । ನರಕಕ್ಕೆ ಕಾಮವು । ಕ್ರೋಧಲೋಭಗಳೆಂಬಿವು ।
ಬಿಟ್ಟು ನೀನವುಗಳ । ಶಾಸ್ತ್ರದಂತೆಯೆ ಕರ್ಮ । ಮಾಡುವದತಿಹಿತವು ॥
ಶ್ರೇಯವು ಪರಮಾತ್ಮ । ಸಿದ್ಧಿಯ ಮಾರ್ಗವು ।
ತಿಳಿದಿದ ಕರ್ಮಗ । ಳಾಚರಿಸೆಂದನ

## ॥ ಶ್ರದ್ಧಾತ್ರಯ ವಿಭಾಗ ಯೋಗ ॥

### ( ಅಧ್ಯಾಯ ೧೭ )

ರಾಗ, ತಾಳ:- ಮೇಲಿನಂತೆ.

ಶ್ರದ್ಧೆಯು ದೃಢವಾಗಿ | ಯಾವ ಗುಣದವಸ್ತು|ಗಳಲಿ ಮಾನವನಿಡುವ |
ನದನು ಹೊಂದುವನವ | ಸತ್ವ ರಜ ಸ್ತಮ | ಗುಣಗಳ ಕೂಡಿರುವ ||
ವಸ್ತುವನದರಿಂದ | ನಿರ್ಗುಣವಾಗಿಹ |
ವಸ್ತುವಿನೊಳಗಿಡು | ಭಕ್ತಿಯನೆಂದವ ॥ ೧ ॥

ಶ್ರದ್ಧೆಯುದುತ್ತಮ | ಸುರರೊಳಗಿಡುವದು | ಸಾತ್ವಿಕವೆನಿಸುವದು |
ರಾಜಸ ಯಕ್ಷ ರಾ | ಕ್ಷಸರೊಳು, ತಾಮಸ | ಭೂತ ಪ್ರೇತಗಳಲದು ||
ನಾಮರೂಪಗಳಿಲ್ಲ | ದೆನ್ನೊಳಗಿಡುವದು |
ಉತ್ತಮೋತ್ತಮವೆಂದ | ದೇವದಯಾಘನ ॥ ೨ ॥

ದಂಭಾಹಮಿಕೆ ಕಾಮ | ರಾಗ ಬಲಗಳಿಂದ | ಕೂಡಿ ಕೊಬ್ಬಿದವನವ |
ಪೀಡಿಸುತನುದಿನ | ಭೂತಗಳನು ವಿಧಿ | ವಿಹಿತವಲ್ಲದ ತಪವ ||
ಗೈವವ ದೇಹದೊ | ಳಡಗಿದೆನ್ನನು ಕೂಡಿ |
ತಾಮಸನವನೆಂದ | ವಸುದೇವಕಂದನಿ ॥ ೩ ॥

ಫಲದಲಾಸೆಯಬಿಟ್ಟು । ವಿಧಿಯಂತೆ ಮಾಡುವ । ಯಜ್ಞವು ಸಾತ್ವಿಕವು ।
ದಂಭಕೆ ಮನದಲಾ । ಸೆಯನಿಟ್ಟು ಫಲದೊಳು । ಗೈವುದು ರಾಜಸವು ॥
ದಕ್ಷಿಣೆ ವಿಧಿಭಕ್ತಿ । ಮಂತ್ರ ಪವಿತ್ರವಾ ।
ದನ್ನವಿಲ್ಲದ ಯಜ್ಞ । ತಾಮಸವೆಂದವ ॥ ೪ ॥

ಆಹಾರ ದಾನದೊ । ಳದರಂತೆ ಭೇದವು । ತಪದೊಳಗಿದೆ ಹಲವು ।
ದೈಹಿಕ, ವಾಚಿಕ, । ಮಾನಸ, ಸಾತ್ವಿಕ । ರಾಜಸ, ತಾಮಸವು ॥
ಉತ್ತಮವಾದುದ । ನದರೊಳು ಸೇವಿಸಿ ।
ಸುಖಿಯಾಗಿ ಬಾಳೆಂದ । ಗೋವಳರಾಯನಿ ॥ ೫ ॥

ಆಯುಷ್ಯ ಸತ್ವ ಸು । ಖಾರೋಗ್ಯ ಬಲಗಳ । ಬೆಳೆಸುವ ಗುಣವುಳ್ಳವು ।
ಶುಚಿಯಾದ ಸ್ನಿಗ್ಧ ಮ । ನೋಹರ ರಸವಿರು । ವಾಹಾರ ಸಾತ್ವಿಕವು ॥
ತೀಕ್ಷ್ಣ ಕಠಿಣ ಬಿಸಿ । ಕಹಿ ಹುಳಿ ಲವಣಗ ।
ಳಿವು ದುಃಖದಾಯಕ । ರಾಜಸವೆಂದವ ॥ ೬ ॥

ಹಳೆದಾಗಿ ಹೊಲಸಾದ । ದುರ್ಗಂಧವಾದನ್ನ । ವುಚ್ಛಿಷ್ಟವಾಗಿಹುದು ।
ತಾಮಸವದನು ಸೇ । ವಿಸಬಾರದೆಂದಿಗು । ತಾಪದಾಯಕವಾದುದು ॥
ಪಾಪವು ರೋಗ ಶೋ । ಕಗಳಿಗದಾಗರ ।
ಸೇವಿಸಿ ನರಳುವ । ನರನೆಂದ ಮುರಹರ ॥ ೭ ॥

ಜ್ಞಾನಿ ಭೂಸುರ ಗುರು ¡ ದೇವರ ಪೂಜೆಯು | ಶುದ್ಧಿ ಸರಳತನವು |
ಬ್ರಹ್ಮಚರ್ಯವು ಹಿಂಸೆ | ಮಾಡದಲಿರುವಿಕೆ | ದೈಹಿಕವಿದು ತಪವು ||
ಸಿಟ್ಟಿಗೇಳದ ಮಾತು | ಪ್ರಿಯವು ಸತ್ಯವು ಹಿತ |
ವೇದದಧ್ಯಯನವು | ವಾಚಿಕವೆಂದವ || ೮ ||

ಮೌನ ಪ್ರಸನ್ನತೆ | ಮನಸಿನ ನಿಗ್ರಹ | ಭಾವದ ಸಂಶುದ್ಧಿಯು |
ಮಾನಸ ತಪವಿದು | ವಿಧಿಯಂತೆಫಲದಾಸೆ | ಯಿಡದೆ ಮಾಡಿದತಪವು ||
ಸಾತ್ವಿಕವಿದು ತನ್ನ | ಮಾನ ಗೌರವಕಾಗಿ |
ದಂಭಕೆ ಮಾಳ್ಪದು ! ರಾಜಸವೆಂದವ || ೯ ||

ಮೂಢನಾಗಿಯೆದೇಹ | ದಾಯಾಸಕೊಳಗಾಗಿ | ಪರರಿಗಹಿತಗೈವುದು |
ತಾಮಸತಪವಿದು | ಪ್ರತ್ಯುಪಕಾರವ | ಬಯಸದೆ ನೀಡುವದು ||
ದೇಶಕಾಲಗಳರಿ | ದರಿತವರಿಗೆ ದಾನ |
ಸಾತ್ವಿಕವೆನ್ನುವ | ಸಾತ್ವತ ಕುಲಸುತ || ೧೦ ||

ಪ್ರತ್ಯುಪಕಾರವ | ನಾಶಿಸಿಫಲಗಳ | ಮನನೊಂದು ಮಾಡುವದು |
ರಾಜಸ; ದೇಶಕಾ | ಲಗಳನು ತಿಳಿಯದ | ನೀಚರಿಗೀಯುವದು ||
ಸತ್ಕಾರ ಮಾನರ | ಹಿತವಾದ ದಾನವು |
ತಾಮಸವೀಪರಿ | ಮಾಡದಿರೆಂದವ || ೧೧ ||

॥ ೧೨ ॥

ತತ್ಸತ್ ಓಂ ಇವು ಮೂರು|ಬ್ರಹ್ಮನ ತೋರುವ ಶಬ್ದಗಳವುಗಳಿಂದ |
ವೇದ ಯಜ್ಞ ದ್ವಿಜ | ರಾಗಿಹರಿದರಿಂದ | ಓಂ ಎಂಬ ವರ್ಣದಿಂದ ||
ಆರಂಭವಾಗುವ | ದೆಲ್ಲ ತಪಕ್ರಿಯೆ |
ಯಜ್ಞ ದಾನಗಳಿಂದ | ಯಜ್ಞವರಾಹಹನಿ

॥ ೧೩ ॥

ತಪ ದಾನ ಯಜ್ಞ ಕರ್ಮಗಳನು ಮಾಡುತ|ಜಾಣರು ತತ್ ಶಬ್ದವ |
ನುಚ್ಚರಿಸುವರವ | ರಿಂದಲೆ ಮೊದಲದ | ನುತ್ತಮವಾಗಿರುವ ||
ಶುಭವಾದ ತಪದಾನ | ಯಜ್ಞ ಕರ್ಮದಿ ತತ್
ಶಬ್ದವನುಚ್ಚರಿ | ಸುವರೆಂಬ ಹರಿಗೆ ನಾ

॥೧೪॥

ಶ್ರದ್ಧೆಯಿಲ್ಲದೆ ಹೋಮಿ|ಸಿದಯಜ್ಞ ಕೊಟ್ಟಿಹ|ದಾನವು ಮೊದಲಾದುದು|
ಒಳ್ಳೆಯದೆನಿಸದು | ಶ್ರದ್ಧೆಯಿಂವಲಿ ಗೈದ | ಕರ್ಮವು ಹಿತವಾದುದು ||
ತಾರಕವಿದು ಸುಖ | ದಾಯಕ ಮುಕ್ತಿಗೆ |
ಸಾಧಕವಾಗಿಹು | ದೆಂದ ದಯಾಘನ

## ॥ ಮೋಕ್ಷ ಸನ್ಯಾಸ ಯೋಗ ॥

### ( ಅಧ್ಯಾಯ ೧೮ )

ರಾಗ, ತಾಳ:—ಮೇಲಿನಂತೆ

ತ್ಯಾಗವು ಕಾಮ್ಯ ಕ। ರ್ಮಗಳನು ಬಿಡುವದು। ಕರ್ಮದ ಫಲವೆಲ್ಲವ।
ಬಿಡುವುದೆ ಸನ್ಯಾಸ। ಬಿಡಬೇಕು ಮನುಜನು। ಪಾಪಕರ್ಮವನೆಲ್ಲವ॥
ತಪ ದಾನ ಯಜ್ಞಗ। ಳನು ಬಿಡದನುದಿನ
ಮಾಡಬೇಕೆಂದರು । ಮತಿವಂತರೆಂದವ ॥ ೧ ॥

ತ್ಯಾಗವಲಿದೆ ಭೇದ: ಮೊದಲಿನಂತೆಯೆಮೂರು। ಸಾತ್ವಿಕ ಮೊದಲಾದವು।
ತಪ ದಾನ ಯಜ್ಞಗ। ಳೆಂಬಿವು ಮನುಜಗೆ! ಪಾವನವಾಗಿಹವು ॥
ಬಿಟ್ಟವುಗಳಲಿ ತಾ । ಫಲಸಂಗಗಳನೆಲ್ಲ !
ಮಾಡಬೇಕೆಂಬುದೆ । ನ್ನಯ ಮತವೆಂದವ ॥ ೨ ॥

ಫಲಸಂಗಗಳ ಬಿಟ್ಟು। ನಿಜವಾದ ಕರ್ಮಗ। ಳನುದಿನಗೈಯುವದು।
ತ್ಯಾಗವೆನ್ನಯ ಮತ। ದಂತೆ ಸಾತ್ವಿಕವಿದು। ಯೋಗಿಯಾಚರಿಸುವದು
ದುಃಖವೆಂದೆನಿಸುತ । ದೇಹದ ಭಯಕಾಗಿ
ಕರ್ಮವ ಬಿಡುವದು। ರಾಜಸವೆಂದವ ॥ ೩ ॥

ಯೋಗಿಗೆ ಕರ್ಮವ | ಬಿಟ್ಟರೆ ಸನ್ಯಾಸ | ವೆಂದಿಗು ಸಾಧಿಸದು |
ಮೂಢನಾಗವನದ | ಬಿಟ್ಟರೆ ತ್ಯಾಗವು | ತಾಮಸವೆನಿಸುವದು ||
ನರನು ಕರ್ಮವನೆಲ್ಲ | ಬಿಡುವದಶಕ್ಯವು |
ಫಲವದರೊಳು ಬಿಟ್ಟು | ಯೋಗಿಯಾಗೆಂದವ || ೪ ||

ಇಷ್ಟ ಅನಿಷ್ಟ ಮಿ | ಶ್ರಗಳೆಂಬ ಫಲ ಮೂರು | ಕರ್ಮದಿಂದಾಗುವವು |
ಕರ್ಮ ಫಲಗಳನು | ಬಿಟ್ಟ ಸನ್ಯಾಸಿಗೆ | ಬಾಧಿಸಲಾರವವು ||
ಕರ್ಮ ಫಲಕೆ ಹೇತು | ವಾಗಿಹುದೈದನು |
ತಿಳಿ ಕರ್ಮ ಬಂಧವು | ತಗಲದೆಂದವಗೆ ನಾ || ೫ ||

ಮನವಾತುದೇಹದಿಂ | ದಾಗುವಕೆಟ್ಟದೊ | ಳ್ಳೆಯಕರ್ಮಗಳಿಗೈದಿವು |
ವಿಧವಿಧವಾದವಿ | ಚಾರವು ಹೇತುವು | ಮೂಲವಸ್ತುವು ಕರ್ತೃವು ||
ದೈವವು ಕಾರಣ | ವಾಗಿವೆ ನೀನಲ್ಲ |
ಕರ್ಮಫಲಕೆ ಹೇತು | ವೆಂದರಿಯೆಂದವ || ೬ ||

ಹೀಗಿರುವಾಗಲು | ಕರ್ಮಕ್ಕೆ ಕರ್ತನು | ತಾನೆಂದು ತಿಳಿದವನು |
ತಿಳಿಗೇಡಿಯವನಾವ | ನಹಮಿಕೆಯನು ಬಿಟ್ಟು | ಮಾಳ್ಪವಮತಿವಂತನು ||
ಕೊಂದರು ಲೋಕವ | ಕೊಂದವನಲ್ಲವ |
ನೆಂದಿಗು ಕರ್ಮಬಂ | ಧಕೆ ಸಿಕ್ಕನೆಂದವ || ೭ ||

ತಿಳಿವವ ತಿಳಿಯತ | ಕ್ಕದು ತಿಳಿಯುವತನ | ಮೂರಿವು ಕರ್ಮವನು |
ಪ್ರೇರಿಸುವವು ಕರ್ತೃ | ಕರ್ಮ ಕಾರಣಗಳು | ಸಂಗ್ರಹಿಸುವವದನು ||
ಕರ್ಮವ ಮಾಳ್ಪವ | ಗಿದೆ ಭೇದ ತಿಳಿಯುವ |
ತನದೊಳು ಗುಣದಿಂದ | ಮೂರೆಂದ ಮುರಹರ || ೮ ||

ಭಾಗವಾಗಿರುವ ಭೂ | ತಗಳಲಖಂಡನಾ | ಗಿರುವವನೊಬ್ಬನೆಂದು |
ತಿಳಿಯುವತನವು ಸಾ | ತ್ವಿಕವಿದು ರಾಜಸ | ವಿವಿಧವಾಗಿರುವದೆಂದು |
ಹೇತುವಿಲ್ಲದೆ ಕಾರ್ಯ | ದೊಳು ಸಕ್ತನವಶನೆಂ |
ದಾತ್ಮನ ತಿಳಿವುದೆ ! ತಾಮಸವೆಂದವ || ೯ ||

ಪ್ರೇಮ ಶಾಂತಿಗಳಿಂದ|ಫಲದಾಸೆ ಸಂಗಗ|ಳಳಿದುಮಾಡಿವಕರ್ಮವು |
ಸಾತ್ವಿಕ; ವಹಮಿಕೆ | ಫಲದಾಸೆಯಾಯಾಸ | ಬಹುಲವು ರಾಜಸವು ||
ತಾಮಸವಿದು ಹಿಂಸೆ | ನಾಶ ಸಂಬಂಧಗ |
ಳರಿಯದೆ ಬಲದಿಂದ | ಗೈವುದೆಂದವಗೆ ನಾ || ೧೦ ||

ಬಿಟ್ಟಹಮಿಕೆಯನು | ಸಿದ್ಧ್ಯಸಿದ್ಧಿಗಳಲಿ | ಚಿಂತಿಸದಿಹ ನರನು |
ಸಾತ್ವಿಕ, ಫಲದಲಾ | ಸೆಯನಿಟ್ಟುಹರ್ಷಶೋ | ಕಗಳನುಪಡುವವನು||
ರಾಜಸ, ನಾಲಸಿ | ತಿಳಿಗೇಡಿ ಮೂರ್ಖನು |
ದುಃಖಿಯಾಗಿರುವವ | ತಾಮಸನೆಂದವ || ೧೧ ||

ಗುಣದಿಂದ ಮತಿಸುಖ | ಗಳಲಿದೆ ಭೇದವು | ಬಂಧ ಕೈವಲ್ಯವನು |
ತಿಳಿಯುವ ಮತಿಯು ಪ್ರ | ವೃತ್ತಿಯನಂತೆ ನಿ | ವೃತ್ತಿಯ ತತ್ವವನು ||
ಭಯವನಭಯವನು | ಮಾಡಬೇಕಾದುದ |
ಮಾಡಬಾರದನೆಲ್ಲ | ಸಾತ್ವಿಕವೆಂದವ || ೧೨ ||

ಅರ್ಥವನರಿಯದೆ | ವಿಧಿಯನ ವಿಧಿಯಾಗಿ | ಪೇಳುತ್ತ ಮಾಡುವದು |
ರಾಜಸ, ವರ್ಥಕ | ನರ್ಥವ ಧರ್ಮಕ | ಧರ್ಮವ ತಿಳಿಯುವದು ||
ಮತಿಯಿದು ತಾಮಸ | ವೆಂದಿಗು ಮತಿವಂತ |
ಪಾಲಿಸಬಾರದೆಂ | ದರುಹಿದ ಮುರಹರ || ೧೩ ||

ಪ್ರಾಣ ಮನೇಂದ್ರಿಯ | ವೃತ್ತಿಗಳನು ಯೋಗ | ಬಲದಿಂದ ಬಿಗಿಹಿಡಿವ |
ಧೃತಿಯಿದು ಸಾತ್ವಿಕ | ಧರ್ಮ ಕಾಮಾರ್ಥಗ | ಳಾಶಿಸಿ ಸಿಂತಿರುವ ||
ಧೃತಿಯಿದು ರಾಜಸ | ಭಯ ಮದ ಸ್ವಪ್ನ ಶೋ |
ಕಗಳನು ಬಿಡದುದು | ತಾಮಸವೆಂದವ || ೧೪ ||

ಆರಂಭದಲಿ ದುಃಖ | ವಾದರು ಕೊನೆಯಲ್ಲಿ | ಸುಧೆಯಂತೆ ಸವಿಯಾಗುವ |
ಬ್ರಹ್ಮಪದದಿ ದುಃಖ | ವೆಲ್ಲವನಳಿವಲ್ಲಿ | ನಿಲ್ಲಿಸಲ್ಲಿಯೆ ಮನವ ||
ತೋರುವ ಸುಖವದು | ಸಾತ್ವಿಕವದನನು |
ಭವದಿಂದ ಯೋಗಿಯು | ತಿಳಿಯುವನೆಂದವ

ಇಂದ್ರಿಯವಿಷಯ ಸಂಯೋಗದಾರಂಭದ | ಲಮೃತದಂತಹಸುಖವು|
ಪರಿಣಾಮದಲಿ ಬಹು | ದುಃಖವೆನಿಸುವದು | ರಾಜಸ, ತಾಮಸವು ||
ಅಲಸಿಕೆ ನಿದ್ದೆ ಪ್ರ | ಮಾದದಲರಿಯದೆ |
ದುಃಖವೆ ಸುಖವೆಂದು | ತಿಳಿಯುವದೆಂದವ || ೧೬ ||

ಪ್ರಕೃತಿಸಂಭವವಾದ | ಮೂರು ಗುಣಗಳನು | ಮೀರಿದ ಮನುಜರಿಲ್ಲ|
ಮೂಜಗದೊಳು ದೇವ | ಮಾನವಾದಿಗಳಲ್ಲು | ಸೇರಿವೆ ಗುಣಗಳೆಲ್ಲ ||
ವಿಪ್ರ ಕ್ಷತ್ರಿಯ ವೈಶ್ಯ | ಶೂದ್ರರಿಗವರ ಸ್ವ |
ಭಾವಗುಣಗಳಂತೆ | ಕರ್ಮಗಳೆಂದವ || ೧೭ ||

ಕ್ಷಮೆ ದಮೆ ಶಮ ತಪ | ಶುದ್ಧಿ ಸರಳತನ | ಜ್ಞಾನ ವಿಜ್ಞಾನಗಳು |
ಆಸ್ತಿಕತೆಯು ವಿಪ್ರ | ಜನರೊಳು ತೋರುವ| ಪ್ರಕೃತಿಯ ಗುಣಗಳಿವು||
ನಾಲ್ಕು ವರ್ಣದ ಜನ | ಕುಕ್ತವಾಗಿಹ ಕರ್ಮ
ವವರಿಗೆ ಹಿತವ ನೀ | ಯುವದೆಂವ ಯಾವವ || ೧೮ ||

ಧೈರ್ಯ ದಕ್ಷತೆ | ಶೂರತನವೀಶ ಭಾವನೆ | ದಾನ ತಪಾದಿಗಳು |
ಯುದ್ಧಕೆ ಬೆದರದ | ಲಿರುವಿಕೆ ಕ್ಷತ್ರಿಯ | ವರ್ಣದ ಕರ್ಮಗಳು ||
ವ್ಯಾಪಾರ ಗೋರಕ್ಷೆ | ಕೃಷಿಗಳು ವೈಶ್ಯಗೆ |
ದ್ವಿಜಸೇವೆ ಶೂದ್ರನಿ | ಗೆಂವ ಮುಕುಂಜನಿ || ೧೯ ||

ಘ್ರಾವವನಿಂದಿದು । ಭೂತಗಳನು ಕೂಡಿ । ವಿಸ್ತರಿಸಿದೆ ಜಗವು ।
ತನ್ನ ಧರ್ಮಗಳಿಂದ । ಲವನನು ಪೂಜಿಸಿ । ಸಿದ್ಧಿಯಹುದು ನಿಜವು ॥
ಗುಣಹೀನವಾದರು । ತನ್ನದಾಗಿಹ ಧರ್ಮ !
ಪರಧರ್ಮಕಿಂತಲು । ಮೇಲೆಂದ ಗೋವಿಂದ ॥ ೨೦ ॥

ನಿನ್ನದಾಗಿಹಧರ್ಮ । ದೋಷಗಳೆಣಿಸದೆ । ಮಾಡುನೀನೆಡಬಿಡದೇ ।
ಸಕಲವರಾರಂಭ । ದೋಷಗಳಿಂದಲಿ । ಕೂಡಿದೆಂಬುದ ತಿಳಿದೇ ॥
ಹೊಗೆಯು ಬೆಂಕಿಯಸುತ್ತ । ಲಿರುವಂತೆ ಇರುವವು ।
ನಿಜಕರ್ಮ ನಿನಗಿದು । ಯುದ್ಧಮಾಡೆಂದವ ॥ ೨೧ ॥

ಚಿತ್ತವ ಜಯಿಸಿಹ । ನಾಸಕ್ತನಾಗದ । ಲಾಸೆಯ ಬಿಟ್ಟವನು ।
ಕರ್ಮದ ಫಲಕವ । ಸಿಲುಕದೆ ಸನ್ಯಾಸ । ದಿಂದವ ಹೊಂದುವನು ॥
ಆತ್ಮಶುದ್ಧಿಯನವ । ಪಡೆಯಲು ಜ್ಞಾನದ ।
ನಿಷ್ಠೆಗಳನು ಪೇಳ್ವೆ । ಕೇಳೆಂದ ಗೋವಳ ॥ ೨೨ ॥

ಧೈರ್ಯದಿಮನವನಿ । ಗ್ರಹಿಸಿ ವಿಷಯ ರಾಗ । ಬಲದರ್ಪಕಾಮಗಳ ।
ನಹಮಿಕೆ ವೈರಪ । ರಿಗ್ರಹ ರೋಷಗ । ಳೆನಿಸುವ ವೈರಿಗಳ ॥
ಜಯಿಸಿ ವಿರಕ್ತಿ ಸು । ಬುದ್ಧಿಗಳನು ಕೂಡಿ ।
ಜ್ಞಾನಯೋಗದಿ ನಿಷ್ಠ । ನಾಗೆಂದ ಯಾದವ ॥ ೨೩ ॥

ಆಹಾರವನುಮಿತ | ವಾಗಿ ಸೇವಿಸಿ ನೀ | ನಂತರಂಗದಿ ಕುಳಿತು |
ಇಂದ್ರಿಯಮನಮಾತು|ಕಾಯಗಳನು ನಿಯ|ಮಿಸಿ ವಿಷಯವಮರೆತು ||
ಹೃದಯದಿ ನಿರ್ಗುಣ | ನಿರುಪಮನಾದೆನ್ನ |
ಧ್ಯಾನಿಸಿ ಹೊಂದುವಿ | ಯೆಂದ ರಮಾಧವನ || ೨೪ ||

ಜ್ಞಾನಿಯಾದವ ಶೋಕ|ಪಡಲಾರನಿಚ್ಛೆಯ|ನಿಡಲಾರ ವಿಷಯದಲಿ |
ಸಕಲ ಭೂತಗಳಲಿ | ಸಮನಾಗಿ ಭಕ್ತಿಯ | ನಿಟ್ಟು ತಾಭಜಿಸುತಲಿ ||
ಎಷ್ಟಿಹೆನಾರು ನಾ | ನೆಂಬುದ ತಿಳಿದವ |
ಕೊನೆಗೆನ್ನ ಸೇರುವ | ನೆಂದ ಯತೀಂದ್ರನಿ || ೨೫ ||

ಮನವೃತಿಗಳ ನನ್ನ | ಲಿಟ್ಟು ಕರ್ಮಗಳ ನೀ | ನನಗೆ ಸಮರ್ಪಿಸುತ |
ಮರೆಯದೆ ಸ್ಮರಿಸುತ | ಸೇರುವಿ ಶಾಶ್ವತ | ಪದವನು ನಗುನಗುತ ||
ನೀಗಿ ದುಃಖವ ನನ್ನ | ದಯೆಯಿಂದ ಸುಖಿಯಾಗಿ |
ಬಾಳುವಿ ಹೂಡು ಗಾಂ | ಡೀವವನೆಂದವ || ೨೬ ||

ಕೇಳದಿದ್ದರೆಮಾತ | ನೆಷ್ಟು ಹೇಳಿದರೆನ್ನ | ಹೊಂದುವಿ ನಾಶವನು |
ಕೆಟ್ಟಾಹಮಿಕೆಯಿಂದ | ಕಷ್ಟಕ್ಕೆ ಗುರಿಯಾಗಿ | ಬಾಳುವಿ ತಿಳಿಯಿದನು ||
ಕ್ಷಾತ್ರಸ್ವಭಾವವು | ನಿನ್ನದಾಗಿರುವದು |
ನಿನ್ನನೆಂದಿಗು ಬಿಡ | ದೆಂದ ಮುಕುಂದನಿ || ೨೭ ||

ಪ್ರಕೃತಿಯ ಗುಣವಾದ | ನಿಜಕರ್ಮದಿಂದ ನೀ | ಬದ್ಧನಾಗಿಹೆ ನರನೆ |
ಪ್ರಕೃತಿಯು ನಿನ್ನನು | ಬಿಡದದೆಂದೆಂದಿಗು | ಗೈಯ್ಯುವಿಯುದ್ಧವನೇ ||
ಜಗದೊಳಗಾರನು | ಬಿಡದೆಂದ ಮೇಲದು |
ಬಿಡುವುದೆ ನಿನ್ನನು | ಯುದ್ಧ ಮಾಡೆಂದವ || ೨೮ ||

ಸಕಲ ಭೂತಗಳಲ್ಲಿ | ಹೃದಯದಲಿಹನೊಬ್ಬ | ನೀಶ್ವರನವ ಬಲ್ಲವ |
ಮಾಯೆಯಿಂದಲಿ ಯಂತ್ರ | ಗಳಲಿಟ್ಟ ವಸ್ತುವ | ತೆರದಲಿ ಜಗವನವ ||
ತಿರುಗಿಸುವವ ನೀ | ಸಕಲ ಭಾವಗಳಿಂದ |
ಶರಣು ಹೊಂದವನೀವ | ಮುಕ್ತಿಯನೆಂದವ || ೨೯ ||

ತಿಳಿದಿಲ್ಲ ಜನರಿದ | ನಂತರಂಗದ ಮಾತ | ನಾವುದ ಜಗದೊಳಗೆ |
ಅಂತರಂಗದೊಳಂತ | ರಂಗವಾಗಿಹ ಜ್ಞಾನ | ವಿದನರುಹಿದೆ ನಿನಗೆ ||
ಕೊನೆಯ ಮಾತಿದು ನಿನ್ನ | ಮನಸಿನಂತೆಯೆಮಾಡು |
ಬಿಡು ಮನನವ ಮಾಡಿ | ನೋಡೆಂದ ಗೋವಿಂದ || ೩೦ ||

ಭಜಿಸು ನೀನೆನ್ನನು | ಮನವಿಡು ನನ್ನೊಳು | ಹೋಮಿಸುನಮಿಸೆನಗೆ |
ಮಿತ್ರನಾದೆನ್ನನು | ಹೊಂದುವಿ ಶಪಥವ | ಮಾಡೆನ್ನುವೆನು ನಿನಗೆ ||
ಸಕಲ ಧರ್ಮಗಳನ್ನು | ಬಿಟ್ಟೆನ್ನ ಶರಣುಬಾ |
ಪಾಪವ ಹರಿಸೀವೆ | ಮುಕ್ತಿಯನೆಂದವ || ೩೧ ||

ಶ್ರದ್ಧೆಯು ನನ್ನಲ್ಲಿ । ನನ್ನ ಮಾತುಗಳಲ್ಲಿ । ಪ್ರೇಮವನಿಡದವಗೆ ।
ನಿಂದಿಸುವವಗಂತ । ರಂಗವಾಗಿಹುದಿದ । ಪೇಳಬಾರದು ನರಗೆ ॥
ಯಾವವನಿದನೆನ್ನ । ಭಕ್ತರಿಗರುಹುವ ।
ನನ್ನ ಹೊಂದುವನವ । ನೆಂದ ಮುಕುಂದನಿ ॥ ೩೨ ॥

ನರರೊಳು ನರನೆಂದು । ಹೆಸರಾದ ನಿನ್ನಿಂದ । ಹೊರತಿಲ್ಲ ಪ್ರಿಯರೆನಗೆ ।
ಆಗಬಾರದು ಮುಂದೆ ।ಯೆಂದರುಹಿದೆ ಯೋಗ । ವಿಜ್ಞಾನವನು ನಿನಗೆ ॥
ಧರ್ಮಸಂವಾದವ । ನಿದನೋದಿ ಪೇಳುವ ।
ಜ್ಞಾನಿಯಾದವನವ । ಮಿತ್ರನೆಂದಾತನಿ ॥ ೩೩ ॥

ಪಡದಲಸೂಯೆಯು । ಗೀತೆಯ ಭಕ್ತಿಯಿಂ । ಕೇಳಿದವನು ಹೊಂದುವ।
ಮೋಕ್ಷವ ಪುಣ್ಯಕ । ರ್ಮಗಳಿಂದ ಸಿಗುತಿಹ । ಶುಭಲೋಕಗಳನೆಲ್ಲವ ॥
ಕೇಳಿದೆಯಾ? ಪಾರ್ಥ । ಹೋಯಿತೆ ಮನದಿಂದ ।
ಮೋಹ ಸಂದೇಹಗ । ಳೆಂದು ಕೇಳಿದ ಕೃಷ್ಣ ॥ ೩೪ ॥

ಮೋಹ ಸಂದೇಹಗ । ಳಳಿವವುದಯಿಸಿದ । ಹೃದಯದಿ ಪರಮಾತ್ಮನು ।
ಸ್ಮರಣೆಯಾಯಿತು ಸಕ । ಲದಿ ವಾಸುದೇವನು । ವಾಸವಾಗಿರುತಿಹನು॥
ವಂದಿಸಿ ಧನುವೆತ್ತಿ । ಮಾತ ಪಾಲಿಸುವೆನೆಂ ।
ದೆನ್ನುವ ಪಾರ್ಥನ । ನೋಡಿ ನಲಿದ ಕೃಷ್ಣ ॥ ೩೫ ॥

ಯೋಗಿಗಳೊಡೆಯ ಶ್ರೀ। ಹರಿಯೆಲ್ಲಿ ಧನುವನು।ಧರಿಸಿದ ವಿಜಯನೆಲ್ಲಿ
ದೃಢವಾಗಿ ಮತಿಭೂತಿ। ನೀತಿ ವಿಜಯಲಕ್ಷ್ಮೀ। ಗಳು ನೆಲೆಸಿರುವವಲ್ಲಿ
ವಿಶ್ವದ ಹಿತಕಾಗಿ। ಗೀತೆಯ ವಿಜಯನಿ।
ಗರುಹಿದ ವರಯೋಗಿ। ವಿಜಯ ಸಾರಥಿಗೆ ನಾ ॥ ೩೬ ॥

**ಕವಿಯ ಪ್ರಾರ್ಥನಾ ಪದ್ಯ:-**

ಕುಲದಿಂದ ಕೃತಿಯಿಂದ। ಕವಿಯಂದ ಗೀತೆಯ। ಕನ್ನಡ ನುಡಿಗಳಿಂದ।
ಪಾಡಿದ ಜನರಿಗೆ। ಬೇಡಿದ ವರಗಳ। ಹರಿಯು ಸಂತೋಷದಿಂದ ॥
ಕೊಡಲೆಂದು ಕನ್ನಡ। ಜನಕಿದು ಮುದ್ದಿನ।
ನುಡಿಯಾಗಿ ಸಲಲೆಂದು। ವಂದಿಸಿ ಕೃಷ್ಣನಿಗೆತ್ತುವೆನಾರತಿಯ ।

ಗೀತಾ ಸಮಾಪ್ತಿ

....ಶ್ರೀ ಕೃಷ್ಣಾರ್ಪಣಮಸ್ತು....



## ನಮ್ಮಲ್ಲಿ ದೊ...

●

| | |
|---|---|
| ಶ್ರೀ ಗೋಕರ್ಣಕ್ಷೇತ್ರ ಪ್ರ... ...ವತಾ ಸ್ತವನಮಾಲಾ | ೦— ೬— |
| " " ಸಟಿಪ್ಪಣ | ೦— ೮— |
| ...ತ್ರ ಗೋಕರ್ಣ ಪ್ರಭ... ಕನ್ನಡ | ೦— ೮— ೦ |
| " ಹಿಂದೀ | ೦— ೮—೦ |
| " ...ರಾಠೀ | ೦— ೯—೦ |
| " ಇಂಗ್ಲೀಷ | ೦— —೦ |
| ...ೋಕರ್ಣ ಪುರಾಣ ಅಧ್ಯಾಯ ... ಸಟೀಕಾ ತೆಲಗು | ೩— ೦—೦ |
| ...ೋಕರ್ಣ ಪುರಾಣ ಅಧ್ಯಾಯ ೧... ಮೂಲ ಸಂಸ್ಕೃತ | ೧— ೦—೦ |
| ...ಧಾಯನೀಯ ದೈನಿಕ ವಿಧಾನಂ | ೦—೧೦— ೦ |
| ...ೇವರ ಹೂಚೇಡಿದ ಹಾಡುಗಳು | ೦— ૩—೦ |
| ...ತಿಮುಂಜರೀ | ೦— ૩—೦ |
| ...ೀಮಹಾಭಾರತಾಂತರ್ಗತ ದುರ್ಗಾಸ್ತೋತ್ರಂ | ೦— ૩—೦ |
| ...ೀಮಹಾಬಲೇಶ್ವರಾಷ್ಟಕಂ | ೦— ೦—೬ |

...ಮಗ್ರ ಶ್ರೀಗೀತಾ ತಾತ್ಪರ್ಯಯುಕ್ತವಾದ-

ಶ್ರೀಗೀತಾ ಕೃಷ್ಣನ ಆರತಿ ಪದ್ಯಗಳು

ಅಲ್ಲದೆ ಗೋಕರ್ಣದ ಪ್ರಧಾನ ದೇವತೆಗಳ ವಿಧವಿಧ...

...ಗಳೂ ಪಿಕ್ಚರುಗಳೂ ತಾಜಾ ಬೆಳ್ಳಿಯ ಪ್ರತಿಮೆಗಳೂ ಇಲ್ಲಿ ವಿಕ್...

ಸಿಗುವ ಸ್ಥಳ:-

**ಸರಸ್ವತೀ ...**

**ಗೋಕರ್ಣ. (ಉ ಕನ್ನಡ)**

